ವೀರಭಾರತ ಗ್ರಂಥಮಾಲೆ : ೧೪

# ಪಗಾರದಾಕೆ

( ಕಥಾ ಸಂಕಲನ

ಲೇಖಕರು:

ಶ್ರೀ. ಭೀಮಾಜಿ ಗಣಪತರಾವ ಮುತಾಲಿಕ ದೇಸಾಯಿ.






೧೯೫೫ ] [ ಬೆಲೆ: ೧೨ ಆಣೆ

ಅಜಿತ ಪ್ರಕಾಶನ, ಬೆಳಗಾಂವಿ.

# ಕೃತಜ್ಞತೆ

ನಮ್ಮ ಅಜಿತ ಪ್ರಕಟನಾಲಯದಿಂದ ಆಗಾಗ ಕನ್ನಡಿಗರಿಗೆ ಒಳ್ಳೇ ಸಾಹಿತ್ಯವನ್ನು ಒದಗಿಸುತ್ತ ಬಂದಿದ್ದೇವೆ. ಅದೇ ಪ್ರಕಾರ ಈ ಬೇಸಿಗೆಯ ಬಿಡುವಿನಲ್ಲಿ ಕಥೆಗಳ ರಸದೂಟವನ್ನು ಉಣ್ಣಿಸುವ ಸಲುವಾಗಿ **ಶ್ರೀ. ಭೀ ಗ ಮುತಾಲಿಕ ದೇಸಾಯಿಯವರು** ಬರೆದ 'ಸಗಾರದಾಕೆ' ಎಂಬ ಕಥಾ ಸಂಕಲನವನ್ನು ಓದುಗರಿಗೆ ಒದಗಿಸಿದ್ದೇವೆ. ಕನ್ನಡ ವಾಚಕ ವೃಂದವು ಈ ಎಲ್ಲ ನಮ್ಮ ಕಾರ್ಯವನ್ನು ಸಹೃದಯದಿಂದ ಸ್ವೀಕರಿಸಿ ನಮ್ಮ ಪ್ರಕಾಶನವನ್ನು ಸ್ವಾಗತಿಸುವಿರೆಂದು ಕೋರುತ್ತೇನೆ.

ನಮ್ಮ ಪ್ರಕಾಶನಕ್ಕೆ **ಶ್ರೀ ಮುತಾಲಿಕ ದೇಸಾಯಿಯವರು** ತಮ್ಮ ಪುಸ್ತಕವನ್ನು ಕೊಟ್ಟಿದ್ದಕ್ಕಾಗಿ ಕೃತಜ್ಞತೆಯ ವಂದನೆಗಳು.

**ಬೆಳಗಾಂವಿ**
**ತಾ. ೨೫-೪-೫೫**

ತಮ್ಮ,
**ಎ. ಪಿ. ಚೌಗುಲೆ.**

---

ಮುದ್ರಕರು ಮತ್ತು ಪ್ರಕಾಶಕರು,
**ಎ. ಪಿ. ಚೌಗುಲೆ,**
ವೀರಭಾರತ ಮುದ್ರಣಾಲಯ, ಬೆಳಗಾಂವಿ

# ಅರ್ಪಣೆ



ಗೆಳೆಯರು, ಶ್ರೀ. ಕಟ್ಟಿ ರಾಮಚಂದ್ರರಾಯರಿಗೆ

ಲೇ:- ಭೀ. ಗ. ಮುತಾಲಿಕ ದೇಸಾಯಿ.

## — ಮೊದಲು ಮಾತು —

ಈ "**ಪಗಾರದಾಳಿ**" ಎಂಬ ಪುಸ್ತಕದಲ್ಲಿ ಬಂದ ಐದೂ ಕಥೆಗಳೂ ಸ್ವತಂತ್ರ ಕಾಲ್ಪನಿಕವಿರುತ್ತವೆ.

ಕಥೆಗಳನ್ನು ಬರೆಯುವದು ಹಾಗೇ ಚೆಲ್ಲುವದು ಇದೊಂದು ನನ್ನ ಸ್ವಭಾವ. ನನ್ನ ಸಹೋದರ **ನಾರಾಯಣ** ಹಾಗು ನನ್ನ ಗೆಳೆಯರಾದ **ಶ್ರೀ. ಎ. ಎಮ್ ದಳವಾಯಿ, ಶ್ರೀ. ಈಶ್ವರಣ್ಣ ಎಲಿಗಾರ** ಇವರು ನನ್ನ ಕಥೆಗಳನ್ನು ಓದಿ ಆನಂದಪಟ್ಟು "ನೀವು ಈ ಕಥೆಗಳನ್ನು ಹೀಗೇ ಚೆಲ್ಲದೆ ಇವುಗಳನ್ನು ಪತ್ರಿಕೆಗೆ ಕಳಿಸಿರಿ" ಎಂದು ಎಷ್ಟೋ ಸಾರೆ ಆಗ್ರಹಪಟ್ಟರು. ಆದರೆ ಸುಯೋಗವು ಒದಗಿ ಬರಲಿಲ್ಲ. ನಾನು ಶಿಕ್ಷಕ. ನನ್ನದು ಕಟಕೋಳ ಶಾಲೆಗೆ ವರ್ಗವಾಯಿತು. ಇಲ್ಲಿ ಈ ಐದೂ ಕಥೆ ಬರೆದು ಹಾಗೇ ಚೆಲ್ಲಿದ್ದೆ. ನನ್ನ ಗೆಳೆಯರಾದ **ಶ್ರೀ. ಕಟ್ಟಿ ರಾಮಚಂದ್ರ ರಾಯರು** ಈ ಕಥೆಗಳನ್ನು ಕೂಡಿಸಿ ನನ್ನ ಸಹೋದರನ ಮುಖಾಂತರ ಅಜಿತ ಪ್ರಕಟನಾಲಯದವರಿಗೆ ತಮ್ಮ ಮಾಲೆಯಲ್ಲಿ ಪ್ರಕಟಿಸಲು ಕೇಳಿದರು. ಅವರು ಕಥೆಗಳನ್ನು ಓದಿಕೊಂಡು ತಮ್ಮ ಮಾಲೆಯಲ್ಲಿ ಪ್ರಕಟಿಸಲು ಮುಂದೆ ಬಂದದ್ದಕ್ಕಾಗಿ ತುಂಬಾ ಋಣಿಯಾಗಿದ್ದೇನೆ.

**ಶ್ರೀ. ಮಿರ್ಜಿ ಅಣ್ಣಾರಾಯರನ್ನು** ನಮ್ಮ ಪುಸ್ತಕಕ್ಕೆ ಮುನ್ನುಡಿ ಬರೆಯಲು ಕೇಳಿಕೊಳ್ಳಲು ಆನಂದದಿಂದ ಒಪ್ಪಿ ಬರೆದು ಕೊಟ್ಟದ್ದಕ್ಕಾಗಿ ಅವರಿಗೂ ತುಂಬಾ ಋಣಿಯಾಗಿದ್ದೇನೆ.

ಸಕಾಲದಲ್ಲಿ ನಮ್ಮ ಪುಸ್ತಕವನ್ನು ಅತಿ ಪರಿಶ್ರಮದಿಂದ ಮುದ್ರಿಸಿ ಬೆಳಕಿಗೆ ತಂದ ವೀರಭಾರತ ಮುದ್ರಣಾಲಯದ ಮಾಲಕರಾದ **ಶ್ರೀ. ಎ. ಪಿ. ಚೌಗುಲೆ** ಇವರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸದಿರಲಾರೆನು.

ಸಕಾಲದಲ್ಲಿ ಮುಖ ಚಿತ್ರವನ್ನು ತೆಗೆದುಕೊಟ್ಟ **ಶ್ರೀ. ಬಿಜಾಪುರೆ** ಇವರಿಗೂ ನನ್ನ ಅನಂತ ವಂದನೆಗಳು.

ರಸಿಕರಾದ ಓದುಗರು ನನ್ನ ಈ ಹೊತ್ತಿಗೆಯನ್ನು ಓದಿ ತಮ್ಮ ಸದಭಿಪ್ರಾಯ ತಿಳಿಪಡಿಸುವರೆಂದು ನಂಬುವೆನು.

ಓದುಗ ಜನರಿಗೆ ಪರಿಚಯ ಮಾಡಿ ಕೊಟ್ಟ **ಶ್ರೀ. ಪಾಟೀಲರಿಗೆ** ಅನಂತ ವಂದನೆಗಳು.

**ಕಟಕೋಳ**
ತಾ. ೨೫-೪-೧೯೫೫

**ಭೀ. ಗ. ಮುತಾಲಿಕ ದೇಸಾಯಿ.**

## — ಮುನ್ನುಡಿಯ ನಿಮಿತ್ತದಿಂದ —

ನನ್ನ ಶಿಕ್ಷಕ ಮಿತ್ರರಾದ ಶ್ರೀ. ಭೀ. ಗ. ಮುತಾಲಿಕ ದೇಸಾಯಿಯ ವರ ಈ ಮೊದಲ ಕಥಾ ಸಂಕಲನಕ್ಕೆ ಮುನ್ನುಡಿಯ ನಿಮಿತ್ತ ನಾಲ್ಕು ಮಾತುಗಳನ್ನು ಇಲ್ಲಿ ಬರೆಯಲು ನನಗೆ ತುಂಬ ಸಂತಸವಾಗುತ್ತದೆ. ಯಾವ ಕೃತಿಯಾದರೂ ಮುನ್ನುಡಿಯ ಬಲದಿಂದ ಲೋಕದಲ್ಲಿ ಬಾಳಿ ಉಳಿಯದು. ಅದು ತನ್ನ ಗುಣ ವಿಶೇಷದಿಂದಲೇ ಬಾಳಬಲ್ಲುದು. ಆದರೂ ಹೊಸದಾಗಿ ಸಾಹಿತ್ಯ ಕ್ಷೇತ್ರದಲ್ಲಿ ಪ್ರವೇಶಿಸುವ ಕಲಾವಿದರ ಪರಿಚಯವನ್ನೂ ಕೃತಿಯ ಸ್ವಾರಸ್ಯವನ್ನೂ ಓದುಗರಿಗೆ ಮಾಡಿಕೊಡಲಿಕ್ಕೆ ಮುನ್ನುಡಿಯು ಸಾಕಷ್ಟು ಉಪಯುಕ್ತವಾಗುವದು.

ಶ್ರೀಯುತರು ಕನ್ನಡ ಶಾಲೆಯ ಶಿಕ್ಷಕರು. ಹೊಸಗನ್ನಡದಲ್ಲಿ ವಿವಿಧ ಸಾಹಿತ್ಯವನ್ನು ಓದಿಕೊಂಡವರು. ಈಗಾಗಲೇ ಇವರ ಏಕಾಂಕ ನಾಟಕ ವೊಂದು ಪ್ರಕಟವಾಗಿದೆ. ಮನೆಯಲ್ಲಿ ನೂರಾರು ಕಥೆಗಳನ್ನು ಒಂದೆರಡು ಕಾದಂಬರಿಗಳನ್ನೂ ಬರೆದಿಟ್ಟಿದ್ದಾರೆ. ತಮ್ಮ ಶಕ್ತಿಗನುಸರಿಸಿ, ವಿಪುಲ ಸಾಹಿತ್ಯರಚನೆಯನ್ನೇ ಮಾಡಿದ್ದಾರೆಂದು ಹೇಳಬಹುದು. ತಮ್ಮ ಸಣ್ಣ ಕಥೆಗಳಲ್ಲಿ ಕೆಲವನ್ನು ಆಯ್ದು ಇಲ್ಲಿ ಓದುಗರ ಮುಂದೆ ಇಟ್ಟಿದ್ದಾರೆ.

ಸಾಹಿತ್ಯದಲ್ಲಿ ಸಣ್ಣ ಕಥೆ, ಕಾದಂಬರಿ, ನಾಟಕ, ಪ್ರಬಂಧ ಇತ್ಯಾದಿ ವಿವಿಧ ವಿಭಾಗಗಳಿವೆ. ಆಯಾ ವಿಭಾಗಕ್ಕೆ ಒದೊಂದು ವಿಶಿಷ್ಟ ತಂತ್ರವೂ ಇರುತ್ತದೆ. ಅಭ್ಯಾಸಿಗಳೂ ಆರಂಭದ ಅವಸ್ಥೆಯಲ್ಲಿರುವ ಲೇಖಕರೂ ಆಯಾ ತಂತ್ರಗಳನ್ನು ಅಭ್ಯಸಿಸಿ, ಹಿರಿಯರ ಕಲಾಕೃತಿಗಳನ್ನು ಆ ತಂತ್ರ ದೃಷ್ಟಿಯಿಂದ ಓದಿ ಕೃತಿ ರಚನೆಗೆ ಆರಂಭ ಮಾಡುವುದು ಒಳ್ಳೆಯದು. ಕಲಾವಿದನ ಹತ್ತರ ಅನುಭವ ವಿಪುಲತೆಯು ಇದ್ದರೂ ಅದು ಕಲಾಕೃತಿ ಯಾಗಿ ರೂಪು ಗೊಳ್ಳುವುದಕ್ಕೆ ಒಂದು ಒಳ್ಳೆಯ ಸಾಹಿತ್ಯ ತಂತ್ರ, ತಕ್ಕ ಹಾಗೂ ಶುದ್ಧ ಶೈಲಿಗಳನ್ನು ಮೈಗೂಡಿಸಿಕೊಂಡು ಅವತರಿಸುವ ಅವಶ್ಯಕತೆ ಇರುತ್ತದೆ. ಅದಿಲ್ಲದೆ ಹೋದರೆ ಅದು ಕಲಾಕೃತಿ ಎನಿಸದು.

ಇನ್ನು ಕೃತಿಯನ್ನು ಮುದ್ರಿಸುವ ಮೊದಲು ನಾಲ್ಕು ಜನ ಗೆಳೆಯರ ಮುಂದೆಯೂ ಒಬ್ಬಿಬ್ಬ ಹಿರಿಯರ ಮುಂದೆಯೂ ಓದಿ ತೋರಿಸುವುದು ಚೆನ್ನ. ಅದರಿಂದ ಕೃತಿಗಳಿಗೆ ಸಂಸ್ಕಾರ ಸಿಕ್ಕುತ್ತದೆ. ಸಾಹಿತ್ಯ ಉಪಾಸನೆಯ ದಾರಿಯಲ್ಲಿ ಸಹಾಯ ಒದಗಿಬರುತ್ತದೆ. ಹೊಸಗನ್ನಡದ ತರುಣ ಲೇಖಕರೆಲ್ಲ ಇದನ್ನು ಲಕ್ಷಪೂರ್ವಕವಾಗಿ ಗಮನಿಸಬೇಕಾಗಿದೆ.

ಶ್ರೀ. ಮುತಾಲಿಕ ದೇಸಾಯಿಯವರ ಈ ಕಥೆಗಳನ್ನು ಓದಿ, ಕನ್ನಡ ರಸಿಕರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಲಿ. ಶ್ರೀಯುತರಿಂದ ಇನ್ನೂ ಒಳ್ಳೆಯ ಕೃತಿಗಳು ಬೆಳಕಿಗೆ ಬರಲೆಂದು ಹಾರೈಸುವೆ.

ಶಾಂತಿ ಸೇವಾ ಸದನ
ಶೇಡಬಾಳ
೨೦—೪—೧೯೫೫

— ಮಿರ್ಜಿ ಅಣ್ಣಾರಾಯ

# ೧ ಪಗಾರದಾಕೆ



“ರಾಯರೇ—ರಾಯರೇ—” ಎಂದು ತನ್ನ ತೂಗುವ ಚೀಲದೊಂದಿಗೆ ಪೋಸ್ಟಮನ್ ಗುಂಡೇರಾಯನು ಒದರುತ್ತಿರುವಾಗಲೇ ಆಶಾ ತನ್ನ ಪತಿಯು ಹಾಸಿಗೆಯಿಂದ ಕಣ್ಣೊರಿಸುತ್ತ ಆದಾವದೋ ಒಂದು ದುಃಖ ಸಾಮ್ರಾಜ್ಯದಿಂದ ಹೊರಬಂದಂತೆ “ಯಾರು ! ಯಾಕೆ ?” ಎಂಬ ದುಃಖದ ದನಿಯಿಂದ ಕೇಳುತ್ತ ಹೊರಬಂದಳು. ಅಷ್ಟರಲ್ಲಿ ಗುಂಡೇರಾಯನು ತನ್ನ ಮುಂದಿನ ಕೆಲಸಕ್ಕಾಗಿ ಮುಂದಿನ ಮನೆಯನ್ನು ಸೇರಿದ್ದನು. ಅತ್ತ ಇತ್ತ ನೋಡುತ್ತಿರುವಾಗ ಇದಿರಿನಲ್ಲಿ ಒಂದು ಸರಕಾರಿ ಲಕೋಟೆ ಬಿದ್ದಿತ್ತು.

ಆಶಾ ಲಕೋಟೆಯನ್ನು ನೋಡುತ್ತಲೇ ತನ್ನದೇ ಆದ ಶಿಕ್ಷಕಿಯ ಸ್ಥಳದ ಬಗ್ಗೆ ಎಲ್ಲಿಯಾದರೂ ನೇಮಿಸಿರಬಹುದೆಂದು ಅತಿ ಗಡಬಡಿಯಲ್ಲಿ ಅದನ್ನು ಕೈಗೆ ತೆಗೆದುಕೊಂಡು ಹರಿಯಹತ್ತಿದಳು ಕೈಗಳು ನಡುಗಹತ್ತಿದವು. ಹೃದಯದಲ್ಲಿ ವೇದನೆಯಾಗುತ್ತಿತ್ತು. ಕಂಗಳಲ್ಲಿ ಆನಂದಾಶ್ರುಗಳು ಉದುರುತ್ತಿದ್ದವು. ಪಾಕೇಟು ಒಡೆದು ಕಾಗದ ಬಿಚ್ಚಿ ನೋಡಲಾಗಿ ಅಥಣಿ ತಾಲೂಕ ಪೈಕಿ ಐನಾಪೂರಕ್ಕೆ ನಿಮ್ಮನ್ನು ಹಾಕಲಾಗಿದೆಯೆಂದಿತ್ತು.

ಆಶಳಿಗೆ ಈಗ ನಿರಾಶಾ ಆಗಹತ್ತಿತು. ಕ್ಷಯದಿಂದ ಬಳಲುವ ಪತಿಯ ಚಿತ್ರ ಒಂದೆಡೆಗೆ, ಇನ್ನೊಂದೆಡೆಗೆ ನಾಳೆ ಪತಿಯು ಕೈ ಬಿಟ್ಟರೆ ಕೈಯಲ್ಲಿ ಭಿಕ್ಷೆಯ ಪಾತ್ರೆಯ ಹರುಕು ಚಿಂದಿಯ ಬಟ್ಟೆಯ ತನ್ನದೇ ಆದ ಚಿತ್ರ ಇನ್ನೊಂದೆಡೆಗೆ ಈ ಎರಡರ ನಡುವೆ ಆಶಾ ನಿರಾಶಳಾಗಿ ತನ್ನದೇ ಆದ ಒಂದು ಜೀವನದಲ್ಲಿ ಬಳಲಹತ್ತಿದಳು. ಹಾಗೆಯೇ ತಲೆಯ ವಿಚಾರಗಳ ತಾಂಡದಿಂದ ತಡೆಯಲಾರದೆ ಕಣ್ಣಿಗೆ ಕತ್ತಲೆ ಗವಿಯಹತ್ತಿತು. ಹಾಗೇ ತನ್ನ ರೂಮು ಸೇರಿದಳು. ಪತಿಯ ಗತಿಯೇನು ? ಪತಿಯನ್ನು ಈಗ ಬಿಟ್ಟು ಹೋರಟರೆ ಅವರಿಗೆ ಹೇಗೆ ಅನ್ನಿಸಬಹುದು ? ಸ್ತ್ರೀಯರಿಗೆ ಪತಿಯೇ ದೈವ ಪತಿಯೇ ದೇವರು ಎಂದು ಶಾಸ್ತ್ರ ಹೇಳಿದೆ. ಸಾವಿತ್ರಿಯು ತನ್ನ ಪತಿಯನ್ನು

ಪರಲೋಕದಿಂದ ತಂದಿದ್ದಾಳೆ. ಅಂದ ಮೇಲೆ ಸತಿ ಸಾವಿತ್ರಿ ಚರಿತ್ರೆಯ ಪಾರಾಯಣ ಅಕ್ಕಮಹಾದೇವಿಯ ವಚನ ಇವೆಲ್ಲವನ್ನು ಕಲಿಯುವದು ಯಾತಕ್ಕಾಗಿ ? ಪತಿಯನ್ನು ಅಗಲಿ ನಾನು ಈ ಜನ್ಮದಲ್ಲಿ ಮಾಡಬೇಕಾದ ಕಾರ್ಯವು ಯಾವದು ? ಇನ್ನು ಈ ಹುಕುಂ ಬಂದ ಸುದ್ದಿಯನ್ನು ಯಾರಿಗೂ ಹೇಳಲಾರೆ. ಒಂದು ವೇಳೆ ನನ್ನ ಹಡೆದವ್ವನಿಗೆ ತಿಳಿದರೆ ತೀರಿತು. ಅವಳಂತೂ " ಈಗಲೇ ಏಳು, ಸರಕಾರಿ ನವಕರಿ ಕೊಡುವವರಾರು? ಹಣವಿದ್ದರೆ ಎಲ್ಲವೂ ಸೌಖ್ಯ. ಹಣವಿಲ್ಲದಿದ್ದರೆ ಯಾರು ಕೇಳುವರು ? ಅದಕ್ಕಾಗಿ ಇನ್ನು ತಡಬೇಡ, ಹೊರಡು, ನಾಳೆ ನಿನ್ನ ಗಂಡ ಕುಡುಕ, ಜೂಗಾರಿ, ಎಲ್ಲ ಆಸ್ತಿಯನ್ನು ಕಳೆದಿರುವನು, ಕಳೆಯಹತ್ತಿರುವನು. ಅವನಿಗಾಗಿ ನೀನು ಕುಳಿತರೆ ನಿನ್ನ ಕೈಯಲ್ಲಿ........ತಪ್ಪಿದ್ದಲ್ಲ ಪತಿ ಎಂದು ಆದರಿಸದಿರು, ಪತಿ ಇದರ ಅರ್ಥ ಬೇರುಂಟು " ಎಂಬ ಕಾರ್ಕಶವಾದ ಹಣದ ಬೆನ್ನು ಹತ್ತಿದ ಹೆಣದಂತಿದ್ದ ಗೂಬೆಯಂಥ ತಾಯಿ ನನ್ನನ್ನು ಈಗಲೇ ಹೊರಡಿಸುವಳು. ಯಾರ ಮಾತು ಕೇಳಲಿ ? ಯಾರಿಗಾಗಿ ಮರುಗಲಿ ? "ಜಗತ್ತೇ" ಇದಕ್ಕಾಗಿಯೇ ನನ್ನನ್ನು ನಿರ್ಮಿಸಿದಿಯಾ, ಬಸವಾ ? ಜಗದಲ್ಲಿ ನನ್ನನ್ನು ಹುಟ್ಟಿಸದಿದ್ದರೆ ನಿನಗೆ ಸೂರ್ಯ ಚಂದ್ರರು ಹುಟ್ಟಿ ಮುಣುಗು ನಡಿಸುತ್ತಿದ್ದಿಲ್ಲವೇ ? ಅಭಾಗ್ಯ ಒರ್ವ ಭಗಿನಿಯ ಕಣ್ಣೀರನ್ನು ಕುಡಿಯುವಿಯಾ ? ಕುಡಿ, ಕುಡಿ, ಸುಖವಾಗಿ ಕುಡಿ ಬಸವಾ, ಜನ್ಮದ ಪಾಪವು ನನ್ನನ್ನು ಪೀಡಿಸುವದು ? ಬಸವಾ ! ನಾನು ಪಿ. ಎಸ್. ಸಿ. ಪಾಸೇಕೆ ಆದೆ ? ಭಗವಾನ, ಈ ಜಗತ್ತಿನಲ್ಲಿ ನನ್ನದಾದವರು ಯಾರಿದ್ದಾರೆ ? ನನ್ನದಾದ ಒಂದು ಜೀವ ಪತಿ. ಅವನೂ ತನ್ನ ಸೂಳೆಯ ಸಂಗದಲ್ಲಿ, ತಾಯಿ, ಹಣದ ಪುಡಕಿಯಲ್ಲಿ, ದೇವಾ ಏನು ಮಾಡಲಿ ಎಂದು ದುಃಖಿಸುತ್ತಿರುವಾಗಲೇ ಒಳಕೋಣೆಯಿಂದ " ಆಶಾ ಆಶಾ, ನೀರು, ನೀರು, " ಎಂಬ ದುಃಖದ ಸ್ವರವು ಕಿವಿಯಲ್ಲಿ.

ಆಶಾ ಗಾಬರಿಯಾಗಿ ಪಾಪ ಪತಿದೇವನು ಎಷ್ಟು ವೇಳೆ ಹಾದಿ ಕಾಯ್ದಿರಬಹುದು. ನನಗಾಗಿ ಒಂದು ಅರಗಳಿಗೂ ತ್ರಾಸವಾಗಬಾರದೆಂದು ಎಷ್ಟು ಬಗೆಯಾಗಿ ತನ್ನ ತ್ರಾಸವನ್ನು "ಬದಿಗಿರಿಸಿ ನನಗೆ ಏನೂ ಆಗುವದಿಲ್ಲ. ನನಗಾಗಿ ಕಾಳಜಿ ಮಾಡಬೇಡ ಮಳಿಗಾಲ ಸ್ವಲ್ಪ ತ್ರಾಸವಾಗಿದೆ. ಮತ್ತೆ ಕಡಿಮೆಯಾಯಿತೆಂದರೆ ಸೇಂಗಾದ ಮೋಸಂ ಚಾಲು ಆಗುವದು ಒಂದು

ಎರಡು ವಾರಗಳಲ್ಲಿ ನಿನ್ನ ಇಚ್ಛೆಯ ಸೀರಿ ತರುವೆ, ಬಿಲ್ವರು ಮಾಡಿಸುವೆ, ಡಾಕ್ಟರರ ಬಿಲ್ಲು ಕೊಡುವೆ. ಆಶಾ ನಿರಾಶಾ ಆಗಬೇಡೆ ನೀ ನಿಲ್ಲದೆ ಅರಗಳಿಗೆಯು ಯುಗವಾಗುವದು. ಆಶಾ ನನ್ನ ಮುದ್ದು ಆಶಾ" ಎಂದು ಆಶಾಳನ್ನು ಬಲಹೀನವಾದ ತೆಕ್ಕೆಯಲ್ಲಿ ಹಿಡಿದು ತನ್ನದೆಂಬ ದೇಹದ ಅರಿವಿಲ್ಲದೆ ದೇವದಾಸನು ಸ್ವರ್ಗ ಲೋಕದಲ್ಲಿ ನಲಿದಾಡುತ್ತಿದ್ದನು. ತನ್ನ ಆಶಾ ತನ್ನ ತೆಕ್ಕೆಯಲ್ಲಿದ್ದದ್ದು ತನಗೂ ಆಶಳಿಗೂ ಗೊತ್ತಿರಲಿಲ್ಲ. ಆದಾವ ಲೋಕದ ಅಥಿತಿಗಳಾಗಿದ್ದರೋ ಆ ದೇವನೇ ಬಲ್ಲ.

ಆಶಳಿಗೆ ಪತಿಯ ತೋಳಿನಲ್ಲಿ ಕಣ್ಣೀರುಗರೆಯುತ್ತ ಪತಿಯು ತನ್ನನ್ನು ನಂಬಿದ್ದಾನೆ ತನ್ನ ಪತಿಗೆ ತನ್ನ ಬಗ್ಗೆ ಅರುವಾಗಿದೆ. ಇನ್ನು ಇವನನ್ನು ಈ ಸ್ಥಿತಿಯಲ್ಲಿ ಬಿಟ್ಟು ಹೋಗುವದೆಂತು? ನಿಜವಾಗಿ ಭಾರತೀಯರಲ್ಲಿ ಸತಿಗೆ ಪತಿಯೇ ಭೂಷಣ. ಅಂದ ಮೇಲೆ " ಪ್ರಿಯಕರಾ, ನಿನ್ನನ್ನು ಅಗಲಲಾರೆ, ನೀನೇ ನನ್ನ ಸರ್ವಸ್ವ. "

'ಆಶಾ, ಏನಂದಿ ನನ್ನನ್ನು ಅಗಲಲಾರಿ ಆಶಾ ನನ್ನ ನಿಜವಾದ ಚಿನ್ನಾಣಿಯೇ, ಈ ಜಗತ್ತಿನಲ್ಲಿ ನೀನಲ್ಲದೆ ನನಗೆ ಬೇರೊಬ್ಬರುಂಟೇ ? ಹೃದಯೇಶ್ವರಿ, ಹೃದಯದ ಮಂಟಪದಲ್ಲಿ ನಿನ್ನದೇ ಪ್ರತಿಮೆ ನಿನ್ನ ನಿಡಿದಾದ ಸಂಪಿಗೆಯಂಥ ಮೂಗು, ನಸುಗಪ್ಪು ಬಣ್ಣ, ಉಸ್ಟವಾದ ಮುಖ, ತಾವರೆಯ ಆಕಾರದ ಕಪೋಲ, ಮಧ್ಯದಲ್ಲಿ ಕಾಮನ ಬಿಲ್ಲಿನಂಥ ಹುಬ್ಬುಗಳು, ಅದರ ಮಧ್ಯದಲ್ಲಿ ಈ ಜಗತ್ತನ್ನೇ ನಾಚಿಸುವ ಸಿಂಧೂರದ ಬೊಟ್ಟು, ಕಡ್ಡಿಯಿಂದ ಹಚ್ಚುವ ಹುಡುಗೆಯರೆಲ್ಲ ನಿಡಿದಾದ ಮೂರು ಬೆರಳುಗಳಿಂದ ಶೋಭಿಸುವ ಆ ಜಗನ್ನಾಮಕನ ಹೆಸರಿನ ವಿಭೂತಿಯ ಮಧ್ಯದಲ್ಲಿ ಒಂದು ಪೈ ಆಕಾರದ ಕುಂಕುಮ ನೋಡಲು ನಿಜವಾಗಿ ಹೇಮರಡ್ಡಿ ಮಲ್ಲಮ್ಮ, ಅಕ್ಕಮಹಾದೇವಿ, ಸಂತಸಖು ಬಾಯಿಯವರೇ ಎಂಬಂತೆ ಆರ್ಯ ಸಮಾಜದ ಆದರ್ಶ ಸ್ತ್ರೀಯರಂತೆ ತೋರುವಳಲ್ಲ, ಇನ್ನೂ ಹದಿನಾರರ ಹದಿಬಿದಿಯ ಜವ್ವನದಲ್ಲಿ ವಚನ ಭಾಂಡಾರವೇ ತನ್ನದಾಗಿ ಮಾಡಿಕೊಂಡು ತನ್ನ ಜೀವನದ ಪವಿತ್ರತೆಯನ್ನು ಹೊರ ಜಗತ್ತಿಗೆ ನೀಡುವ ಆಶಾಳಂಥ ಹೆಂಡತಿ ಸಿಕ್ಕಿದ್ದು ಅದಾವ ಪುಣ್ಯವು ನನ್ನಲ್ಲಿತ್ತೋ ನಾ ಕಾಣೆ.

ಈ ಬಗೆಯಾದ ಕನಸಿನ ಸಾಮ್ರಾಜ್ಯದಲ್ಲಿ ಕಾಲವನ್ನು ತಕ್ಷಣವಾಗಿ ಕಳೆಯುತ್ತಿರಲು "ಆಶಾ, ಆಶಾ, ಆದಾವ ಪಾಕೇಟಿದೆಯಿಲ್ಲಿ ? ಎಲ್ಲಿರುವಿ ? ಆ ಕ್ಷಯದ ಮನುಷ್ಯನ ಮಗ್ಗುಲಲ್ಲಿ ಸಂಧಿಸದಿರೆಂದು ಎಷ್ಟು ಬಗೆಯಾಗಿ ಹೇಳಬೇಕು ಸಾಯುವದಂತೂ ಸಾಯುವದೇ ತಾ ಮಾಡಿದ ಕರ್ಮವ ಫಲ ತಾ ಉಣ್ಣುವಾಗ ಅದರಲ್ಲಿ ನೀನೇಕೆ ಭಾಗಿಯಾಗುವಿ?" ಎಷ್ಟು ಹೇಳಿದರೂ ಈ ಆಶೆಗೆ ಸ್ವಲ್ಪವೂ ಬುದ್ಧಿಲ್ಲ. ಬಸವಾ, ಬಸವಾ, ಅಂತಾ ಆರ್ಯ ಸ್ತ್ರೀ ಸತಿಗೆ ಪತಿಯೇ ಭೂಷಣ. ಇಂಥ ಅನೇಕ ಪುರಾಣ ಹೇಳುತ್ತ ಡುವಳು. ಇವಳಿಗೆ ಕಲಿಸಿದ್ದೇ ತಪ್ಪಾಯಿತೇ ? ಅದೇಕೆ, ಕಲಿತ ನಮ್ಮ ಗಂಗಿ ಗಂಡನ ಕೂಡ ನಡೆಯುವದಿಲ್ಲವೆಂದು ಅಶಿಕ್ಷಿತ ಗಂಡನೆಂದು ಸೋಡಚೀಟಿ ತೆಗೆದು-ಕೊಂಡು ಎಲ್ಲೋ ಅಕ್ಕೋರಾಗಿ ತನ್ನ ಪ್ರೀತಿಯಿಂದ ಅದಾವೊ ಜಾತಿಯವ ನನ್ನು ವರಸಿದ್ದಾಳೆ. ಈ ನಮ್ಮ ಹುಚ್ಚ ಆಶಳಿಗೆ ಪತಿ, ಸತಿ, ಸಾವಿತ್ರಿ, ಏನೋ ಬಡಬಡಿಸುವದು ತನಗೂ ಸುಖವಿಲ್ಲ. ಇವಳ ಬೆನ್ನು ಹತ್ತಿದ್ದಕ್ಕೆ ನನಗೂ ಸುಖವಿಲ್ಲ. ಎಂದು ಚಡಪಡಿಸುತ್ತಿರುವಾಗ ಪಾಕೇಟು ಕಣ್ಣಿಗೆ ಬೀಳುವದು. ಹದ್ದಿನಂತೆ ಯರಗಿ ಅದನ್ನು ಕೈಯಲ್ಲಿ ತೆಗೆದುಕೊಂಡು ಓದುವಳು.

ಪಾಕೇಟು ಈ ಶಬ್ದ ದೇವದಾಸನ ಕಿವಿಗೆ ಬೀಳುವದು. ದೇವದಾಸನು ಆಶಾಳ ತಾಯಿಯನ್ನು ಕಂಡರೆ ಅವನಿಗೆ ಆಗದು ಅವಳ ದನಿಯನ್ನು ಕೇಳಲು ಅವನಿಗೆ ಸಹಿಸುವದು ಆಗುತ್ತಿರಲಿಲ್ಲ. ಆದರೆ ಆಶಾಳಿಗೆ ಓರ್ವಳಿಗೇ ಕೆಲಸ ನೀಗುತ್ತಿರಲಿಲ್ಲವೆಂದು ಸುಮ್ಮನಿರಬೇಕಾಗಿತ್ತು. ಇತ್ತ ಆಶಾಳ ಕಂಗ ಳಿಂದ ಒಂದೇಸವನೆ ಕಣ್ಣೀರು ಸುರಿಯುತ್ತಿರುವದನ್ನು ದೇವದಾಸನು ಕಂಡು " ಆಶಾ ಅಳುವಿಯೇಕೆ ? "

ಆಶಾಳನ ದುಃಖವು ಇಮ್ಮಡಿಸಿತ್ತು ಕಂಠ ಬಿಗಿದು ಮಾತುಗಳೇ ಹೊರಡಲಿಲ್ಲ. ಆಶಾ

ಆಶಾ, ಆಶಾ, ಆಶಾ, ಎಕೆ ? ಏನಾಯಿತು ? ದುಃಖಿಸದಿರು ಹೇಳು?

" ಯಾಕಿಲ್ಲ "

" ಹಾಗಾದರೆ " ? ಎಂದು, ದೇವದಾಸನು ಆಶಾಳ ತಲೆಯನ್ನು

ನವರುತ್ತ ನಂತೈಸುತ್ತಿದ್ದನು ಆದರೆ ಆಶಾಳಿಗೆ ಸಮಾಧಾನವೆಲ್ಲಿ? ಆದರೂ ಅದರಲ್ಲಿಯೇ ಅದಾವದೋ ಆನಂದ ಅವಳನ್ನು ಮುತ್ತುತ್ತಿತ್ತು.

"ಹೊಸ ಸುದ್ದಿ" ಎಂದು ಆಶಾಳು ಕಣ್ಣು ಒರೆಸುತ್ತಿದ್ದಳು. ಆಗ ದೇವದಾಸನಿಗೆ ಹೊಸ ಸುದ್ದಿ ಎಂದ ಕೂಡಲೇ ಮನಸ್ಸಿನಲ್ಲಿ ವಿಚಾರಗಳ ತಾಕಲಾಟವೇ ಸುರುವಾಯಿತು. ಅದಾವದು ಹೊಸ ಸುದ್ದಿ ತನಗಾಗಿ ವಿಧಿಯು ಚಿತ್ರನಿರ್ಮಿಸಿದ್ದಾನೆ. ಇನ್ನೂ ಯಾವ ಯಾವ ಸಂಕಟ ಬರುವವೋ, ದೇವಾ! ಇನ್ನೂ ನಿನ್ನ ಹಿಂಸೆಯು ಮುಗಿದಿಲ್ಲವೇ? ನನ್ನ ಪಾಪಕ್ಕೆ ಪ್ರಾಯಶ್ಚಿತ್ತ ಇನ್ನೂ ಏನೇನಿದೆ? "ಆಶಾ, ಏನು ಹೊಸ ಸುದ್ದಿ."

"ಪತಿದೇವಾ! ಅದನ್ನು ಹೇಳಲು ಮನ ಒಪ್ಪದು?'

ಆಶಾ, ಆಶಾ, ಎಂದು ಒಳಗಿನಿಂದ ಕರ್ಕಶ ನಾದವು ಇಬ್ಬರ ಕರ್ಣೇಂದ್ರಿಯನ್ನು ಸೇರಿತು. ಇನ್ನು ನಮಗೆ ಯಾವ ಶಿಕ್ಷೆಯು ಅದೆಯೋ ಎಂದು ಇಬ್ಬರು ಗಾಬರಿಯಾಗಿ ಯಾಕೆ? ಎಷ್ಟು ಒದರುವಿ? ಏನಿದೆ ಕೆಲಸ? ಎಂದು ಸಂತಾಪದಿಂದ ಆಶಾ ತಾಯಿಯನ್ನು ಹಸಿದ ಹುಲಿಯ ಆಕಾರವಾಗಿ ಕೇಳಿದಳು. ಪಾರ್ವತೆಮ್ಮನವರು ಸಾಕಷ್ಟು ಕ್ರೂರರಾಗಿದ್ದರೂ ಆಶಾಳ ಆಕ್ರೋಶದ ಮುಂದೆ ಆಗ ಅವರ ಆಟ ನಿಂತು ಧರಣಿಗೇ ಇಳಿದರು "ಎಲ್ಲೆ ನಿನ್ನ ಹುಕುಂ"?

"ಇಷ್ಟೇ ಹೌದಲ್ಲೋ? ಅದಕ್ಕಾಗಿ ಇಷ್ಟೇಕೆ ರಂಭಾಟ?

ಎಲ್ಲಿಯ ರಂಭಾಟು, ನಿನ್ನ ದೈವ ತೆಗೆಯಿತು. ನಿನಗೆ ಸುಖದ ದಿನಗಳ ಮಹಾದ್ವಾರವು ತೆಗೆಯಿತು. ಈ ನಿನ್ನ ನರಕ ತಪ್ಪಿತು. ಅಂತಾ ಆನಂದದ ಅಧಾರದ ವಿಚಾರದಲ್ಲಿ ನಿನ್ನನ್ನು ನಾನು ಕರೆದೆ. ನಿನ್ನನ್ನು ಕುತ್ತಿಗೆ ಕೊಯ್ಯಲು ಕರೆದಿಲ್ಲ. ಒಂಭತ್ತು ತಿಂಗಳು ಹೊತ್ತು ಹಡೆದು ಈ ಕಟುಕನ ಕೈಯಲ್ಲಿ ಕೊಟ್ಟದ್ದೆ. ಮತ್ತೆ ದೇವರು ನನ್ನ ಕಡೆಗಿದ್ದನೆಂದು ನಿನಗೊಂದು ನವಕರಿ ಸಿಕ್ಕಿತು. ಅಂತಾ ಆನಂದದ ಭರದಲ್ಲಿ ಕರೆದೆ. ನಮ್ಮನ್ನಾ ಬಿಡು ಹೀಗೇಕೆ ಮಾಡುವಿ? ನಿನಗೆ ನಾನು ಬೇಡವಾಗಿದ್ದರೆ ಹೇಳು ನನಗಾಗಿವೆ ಕೆರೆ ಭಾಂವಿಗಳು ಎಂದು ಪಾರ್ವತೆಮ್ಮನವರು

ಕಣ್ಣೀರು ಸುರಿಸಹತ್ತಿದರು. ಆಶಾ ದಿಗ್ಭ್ರಮೆಯಿಂದ ಕುಳಿತಲ್ಲಿಂದ ಕದಲ ಲಿಲ್ಲ. ಆದರೆ ಮನದಲ್ಲಿ ವಿಚಾರಗಳ ತಾಕಲಾಟ.

ದೇವದಾಸನಿಗೆ ಈ ಸುದ್ದಿ ತಿಳಿದು ಕೈಕಾಲುಂಗಳೇ ಹೋದವು. ಈ ಅವಸ್ಥೆಯಲ್ಲಿ ಹೆಂಡತಿಯೊಬ್ಬಳನ್ನು ಬಿಟ್ಟರೆ ಈ ಜಗತ್ತಿನಲ್ಲಿ ನನಗಾಗಿ ಯಾರೂ ಇಲ್ಲ. ಈಗ ಅವಳೂ ಕಂಗೆಟ್ಟು ನಡೆದಳು. ಅಂದ ಮೇಲೆ ನನಗಾಗಿ ಯಾರು? ಎಂದು ದೇವದಾಸನು ಮುಖ ಹೊರಳಿಸಿ ದುಃಖಿಸ ಹತ್ತಿದನು.

ಆಶಾಳಿಗೆ ಪತಿಯ ದುಃಖವು ಹೃದಯದಲ್ಲಿ ಬಾಣ ಹೊಡೆದಂತಾ ಯಿತು. ಅವಳು ಪತಿಯ ಮುಖವನ್ನು ತನ್ನೆಡೆಗೆ ಹೊರಳಿಸಲು ಪ್ರಯತ್ನಿಸ ಹತ್ತಿದಳು. ಆದರೆ ದೇವದಾಸನು, ಮುಖವನ್ನು ಹೊರಳಿಸಲಿಲ್ಲ. ತನ್ನ ಮುಖವನ್ನು ಇನ್ನು ಮೇಲಕ್ಕೆತ್ತಿ ಇವಳಿಗೆ ತೋರಿಸನೆಂದು ಹಟ ತೊಟ್ಟನು. ಆಗ ಆಶಾಳಿಗೆ ದಿಕ್ಕೇ ತೋಚದಾಯಿತು. ದುಃಖಿಸುತ್ತ ಅವನ ಬೆನ್ನ ಮೇಲೆ ಒರಗಿದಳು.

ಕೆಲ ಸಮಯವಾದ ನಂತರ ಆಶಾ ದುಃಖದಿಂದ ಉಬ್ಬಿದ ಕಣ್ಣು ಗಳಿಂದ ತಾಯಿಯೆಡೆಗೆ ನೋಡಿದಳು. ತಾಯಿಯಾದ ಪಾರ್ವತೆಮ್ಮನು "ನಾನು ನಿನಗಾಗಿ ಇಷ್ಟು ಕಷ್ಟಬಡುವದು ಊರ ಎಲ್ಲ ಹಿರಿಯರ ಕಾಲು ಗಳನ್ನು ಕಟ್ಟಿಕೊಂಡು ಈ ಹುಕುಂ ಪಡೆದೆ ನೀನು ಅದನ್ನು ತೆಜಿಸುವ ವಿಚಾರದಲ್ಲಿ ಮಗ್ನಳಾಗಿರುವೆ. ಇಂದೇ ಇವನು ಸತ್ತರೆ ನಾಳೆ ನಿನ್ನ ಕೈಯಲ್ಲಿ ಪರಟೆ ಬರುವದು. ಬಹಳ ಎಚ್ಚರಿಕೆ ಇನ್ನು ನೀನು ದುಡಿದು ಅವನಿಗೆ ಹಣಕೊಡು ಅವನನ್ನು ಜೋಪಾನ ಮಾಡು ಹಣವಿಲ್ಲದೆ ಜೋಪಾನ ಮಾಡುವದು ಹೇಗೆ? ಹಿಂದಿನ ಆಸ್ತಿಯಲ್ಲ ಹೋಗಿದೆ. ಇರುವ ದೊಂದು ಮನೆ ಅದನ್ನು ಕಳೆದರೆ ನಾಳೆ ನಿನಗೆ ನಿಲ್ಲಲು ಊರ ಹೊರಗೆ ಚಪ್ಪರ. ಬಹಳ ಎಚ್ಚರಿಕೆ" ಎಂದು ಒಂದೇ ಉಸರಿನಲ್ಲಿ ಪಾರ್ವತೆಮ್ಮ ನವರು ಒದರಿದರು.

ಆಶಾಳಿಗೆ ಇದೂ ನಿಜವೆನಿಸಿತು. ತಾನು ನವಕರಿ ಮಾಡಿ ಪತಿ ಯನ್ನು ಜೋಪಾನ ಮಾಡಲು ಬರುವದು. ಅಂದ ಮೇಲೆ ನವಕರಿಯನ್ನು ಮಾಡಬಾರದೇಕೇ? ಎಂಬ ಪ್ರಶ್ನೆಯು ಅವಳನ್ನು ಬಾಧಿಸಹತ್ತಿತು.

ಪಾರ್ವತೆಮ್ಮನವರಿಗೆ ಮಗಳ ಮನಸ್ಸಿಗೆ ತಾನು ಹೇಳಿದ ಮಾತು ಗಳ ಸಟಾಯಿಸಿಡವೆಂದು ಆನಂದವಾಯಿತು. ಅವಳು ದೇವರಿಗೆ ಬಸವ ನಿಗೆ ದೀವಿಗೆ ಹಚ್ಚಲು ಒಳಗೆ ಹೋದಳು.

ಆಶಾ ಪತಿಯು ಬಲಬದಿಗೆ ಕುಳಿತು ನೀರು ಕೊಡಲೆ? ಹಣ್ಣು ಬೇಕೆ? ಎಂದು ಅವನ ತಲೆಯನ್ನು ಸವರುತ್ತ ಒಂದು ಕೈಯಿಂದ ಧಾರಾ ಕಾರವಾಗಿ ಬರುವ ಕಣ್ಣೀರನ್ನು ಒರಿಸಿಕೊಳ್ಳುತ್ತ ಕೇಳಿದಳು.

"ಆಶಾ ನನಗಾಗಿ ನೀನು ಕೊರಗದಿರು ಸೊರಗದಿರು ಮರುಗದಿರು ಸರ್ವವೂ ಆಗುವದೆಲ್ಲ ನಮ್ಮ ಹಿತಕ್ಕಾಗಿಯೇ ಅದೆ. ಇನ್ನು ನೀನು ಪಗಾರದಾಕೆ ನನ್ನನ್ನು ಪಾತ್ರ ಮರೆಯ ಬೇಡಿ ನೀನು ಹೋಗು. ಹೋಗು ವಾಗ ನಿನ್ನ ಅಡ್ರೆಸ್ಸು ಬರೆದು ಈ ದಿಂಬಿನ ಅಂಚಿಗೆ ಇಟ್ಟ ಹೋಗು. ಸಂಜೆಯ ಗಾಡಿಗೆ ಹೋಗಿ ಬಿಡು. ದುಃಖಿಸದಿರು. ಸುಖ ದುಃಖಗಳು ಮಾನವನ ಅನವಾರ ಸ್ನೇಹಿತರು ತಾನೊಂದು ಬಗೆದೊಡೆ ದೈವ ಬೇರೊಂದನ್ನು ಬಗೆಯುತ್ತದೆ. ಇದು ಸೃಷ್ಟಿಯ ನಿಯಮ ಕಾಲನ ಮಹಿಮೆ. ಕಲಿಯ ಚಮತ್ಕಾರವಾದ ಆಟ. ಇದು ನನ್ನ ನಿನ್ನ ಸುಖದುಃಖದ ಜೋಂಟಾಟ. ಇನ್ನು ನನ್ನನ್ನು ಮುಟ್ಟದಿರು. ಈ ಭೂಮಿಯಲ್ಲಿ ನನಗಾಗಿ ರುವ ವಸ್ತು ಒಂದೂ ಇಲ್ಲ."

"ಪತಿದೇವಾ ಎಲ್ಲವೂ ನಿನ್ನವು. ಈ ಶರೀರವೇ ನಿನ್ನದಿರುವಾಗ ಅದಾವುದು ಬೇರೊಬ್ಬರದು."

"ಈ ಶರೀರ ನಿನ್ನ ತಾಯಿಯದು. ಈ ಬಳಿಗಳು ಆರ್ಯಧರ್ಮದ ಕುರುಹು ಕುಂಕುಮ ಹಣ್ಣು ಬಾಳಿನ ಒಗಟು ಮಾಂಗಲ್ಯ ಮಾತ್ರ ನನ್ನದು ಅಂದು ನಾನಿರುವವರೆಗೆ ಹೊಳೆಯಲೇ ಬೇಕು" ಎಂದು ಗದ್ಗದ ಕಂಠದಿಂದ ಕಣ್ಣೀರು ಉರುಳಿಸುತ್ತ ಮಗ್ಗುಲಲ್ಲಿ ಬಿದ್ದ ಹೊವಕೆಯನ್ನು ಕೈಯಲ್ಲಿ ತೆಗೆದುಕೊಂಡನು. ಆಶಾಳಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಇದು ಏನಾಯಿತು? ಈ ಶರೀರದ ಮೇಲೆ ತನ್ನದೆಂಬುವ ವಸ್ತು ಮಾಂಗಲ್ಯ ಬಿಟ್ಟು ಯಾವದೂ ಇಲ್ಲವೆನ್ನುವರಲ್ಲಾ? ಇದೇ ಎರಡು ತಾಸಿನ ಹಿಂದೆ ಸರ್ವವು ತನ್ನದೆ ಎನ್ನುವ ಪತಿಯು ಈಗ ಯಾವದೂ ನನ್ನದಲ್ಲವೆಂದು

ಅನ್ನುವರು ಎಂಥಾ ದೈವ ಹೇ ಬಸವಾ, ಹೇ ಬಸವಾ ನನಗಾಗಿ ಈ ನಾಟಕ ನಿರ್ಮಿಸಿದೆಯಾ? ಇನ್ನೂ ಈ ಅಭಾಗಿನಿಯು ಕಣ್ಣೀರು ಕುಡಿವೆಯಾ ಹೇ ಬಸವಾ ಎಂದು ಕಣ್ಣೀರು ಸುರಿಸುತ್ತ ಅಲ್ಲಿಯೇ ಪತಿಯು ಬಳಿಯಲ್ಲಿ ಮಲಗಿದಳು. ಅವಳಿಗೆ ಚಿಂತೆಯಿಂದ ದಣಿದ ಶರೀರಕ್ಕೆ ನಿದ್ರಾದೇವಿಯು ಆವರಿಸಿದಳು. ಆದರೆ ಮಾತ್ರ ದೇವದಾಸನಿಗೆ ನಿದ್ರೆಯು ಕಡಿದರೂ ಬರಲಿಲ್ಲ. ದುಃಖಿಸುತ್ತ "ಯಾರಿಗೆ ಯಾರೋ ಈ ಎರವಿನ ಸಂಸಾರ ನೀರ ಮೇಲಿನ ಗುಳ್ಳಿ ನಿಜವಯ್ಯಾ ಹರಿಯೇ ಯಾರಿಗೆ ಯಾರೋ" ಎಂದು ಹೊರಗಡೆಗೆ ಕೃಷ್ಣರೆಸ್ಟಾರೆಂಟದಲ್ಲಿ ಧ್ವನಿವಾಹಕವು ಹಾಡನ್ನು ಬೀರುತ್ತಿತ್ತು.

ಆಶಾಳಿಗೆ ಎಚ್ಚರವಾದಾಗ ಸಂಜೆಯು ೬ ಘಂಟೆಯಾಗಿತ್ತು. ತಾಯಿಯು ಎಕ್ಸಪ್ರೆಸ್ಸಿಗೆ ಹೊರಡುವ ಸಿದ್ಧತೆ ನಡಿಸಿದ್ದಳು. ಪಾರ್ವತೆಮ್ಮಾನವರು ಮಗಳನ್ನು ಕೂಗಿ ಹೋಗುವದಾಗಿ ಹೇಳಿದರು. ಆಶಾ ತಲೆಯನ್ನು ಅಲ್ಲಾಡಿಸುತ್ತ ಪತಿಯ ರೂಮು ಸೇರಿದಳು. ಆಗಿನ ಅವಳ ಸ್ಥಿತಿಯನ್ನು ಕಣ್ಣಿನಿಂದ ನೋಡುವದು ಕಠಿಣವಾಗಿ ದೇವದಾಸನು ಹೊದ್ದ ಮುಸುಕು ತೆಗೆಯಲಿಲ್ಲ. ಆಶಾಳ ಬಾಯಿಂದ "ಸಾಕೋ ಸಂಸಾರ" ಎಂಬ ಪದ್ಯವು ತಾನಾಗಿಯೇ ದುಃಖಪೂರಿತವಾಗಿ ಹೊರಬಂದಿತು. ಆದರೆ ದೇವದಾಸನು ಏನು ಅನ್ನಲಿಲ್ಲ ಅವನ ಮನಸ್ಸಿಗೆ ಒಂದು ಬಗೆಯ ಶಾಂತಿ ಸಿಕ್ಕಿತು "ಹೋಗಿ ಬರುವೆ ಪತಿದೇವಾ" ಎಂದು ನಮಸ್ಕಾರ ಮಾಡಹೋದಳು. ಆದರೆ ದೇವದಾಸನು ಅವಳ ನಮಸ್ಕಾರ ಸ್ವೀಕರಿಸಲಿಲ್ಲ. "ಆಶಾ ನೀನು ಇನ್ನು ಪಗಾರದಾಕೆ ನಮಸ್ಕರಿಸದಿರು." ಈ ವರೆಗೆ ಈ ಪಾಪಿಯು ಕೊಟ್ಟ ಯಾತನೆಗಳನ್ನು ಮರೆತು ಕಾಲಹರಣ ಮಾಡು." ಏಳು ಜನ್ಮಕ್ಕೂ ಇಂಥ ಪತಿಯು ದೊರೆಯದಿರಲೆಂದು ನಿನ್ನ ಆ ಬಸವನನ್ನು ಪುನಃ ಪುನಃ ನೆನಿಸಿ ದೇವರು ನಿನಗೆ ಆಯುರಾರೋಗ್ಯವನ್ನು ದಯಪಾಲಿಸಲಿ" ಎಂದು ಕಣ್ಣೀರಿನಿಂದ ತುಂಬಿದ ಕಣ್ಣಾಳಿಂದ ಆಶಾನನ್ನು ನೋಡಬೇಕೆಂದು ಕಣ್ಣು ಹೊರಳಿಸಿದನು. ಕಣ್ಣು ತೆಗೆಯುವ ಶಕ್ತಿ ಮಾತ್ರ ಅವನಿಗಾಗಲಿಲ್ಲ.

ಪಾರ್ವತೆಮ್ಮನವರು ಗಂಟು ಮೊಟ್ಟೆ ಕಟ್ಟಿಕೊಂಡು ಬಾಗಿಲದಲ್ಲಿ ನಿಂತು ವೇಳೆಯಾಗಿದೆ ಗಾಡಿ ಹೋಗುತ್ತದೆ. "ಆಶಾ ಬೇಗ ನಡೆಯಮ್ಮಾ" ಎಂದು ಕೂಗುತ್ತಿದ್ದರು. ಒಂದೆಡೆ ಪತಿ. ಒಂದೆಡೆ ತನ್ನ ಭಾವೀ ಭವಿಷತ್ತು

ಈ ಬಗೆಯಾದ ಗೊಂದಲದಲ್ಲಿ ಆಶಾ, ನಿರಾಶಾ ಹೆಜ್ಜೆಗಳನ್ನಿಡುತ್ತ ತಾಯಿಯ ಬೆನ್ನು ಹತ್ತಿದಳು. ಶರೀರ ಮಾತ್ರ ತಾಯಿಯಡೆಯಲ್ಲಿತ್ತು ಆದರೆ ಮನಸ್ಸು ದೇವದಾಸನಲ್ಲಿಯೇ ಇತ್ತು. ವಿಜಯ ಬಂದು ಅತ್ತಿಗೆ ಹೋಗಿ ಬರ್ರಿ ಎಂದು ನಮಸ್ಕಾರ ಮಾಡಿದ. ಭಾರವಾದ ಶರೀರದಿಂದ ಬಾಗಿಲ ದಾಟಿ ಮುಂದಕೆ ಬಂದು ಪತಿಯೇ ಪರದೈವವೆಂದು ಕೈಮುಗಿದು ಹೊರಳಿದಾಗ ಕೃಷ್ಣರೆಸ್ಟಾರೆಂಟದಲ್ಲಿ "ನೀರಿಗೆ ನೈದಿಲಿಯೇ ಶೃಂಗಾರ" ಎಂಬ ಪದವು ಧ್ವನಿವಾಹಕವು ಬೀರುತಿತ್ತು. ಆಶಾಳಿಗೆ ಅದು ತನ್ನನ್ನೇ ಕೆಣಕುವದೆಂದು ಕಿವಿಯಲ್ಲಿ ಬೊಟ್ಟಿಟ್ಟುಕೊಂಡು ಮುಂದೆ ಸಾಗಿದಳು.

# ೨ ಆನಂದ

ಧಡಲ್ ಧಡಲ್...........ಎಂಬ ಶಬ್ದಗಳು ಹೊರಗಡೆಗೆ ಸಪ್ಪಳವಾಯಿತು. ಎದೆಯಲ್ಲಿ ಅದಾವದೋ ಒಂದು ಬಗೆಯ ದುಃಖದ ಆರ್ತನಾದವು ಕೆರಳಿಸಿತು. ಏಳಬೇಕೆಂದರೂ ಶಕ್ತಿಯಿಲ್ಲ. ಹಾಗೇ ಸವರಿಸುತ್ತ ಹಾಸಿಗೆಯ ಮೇಲೆ ಎದ್ದು ಕುಳಿತು ಹೊರಬೀದಿಯಲ್ಲಿ ಏನು ನಡೆದಿದೆ ನೋಡಲು ಹೊರಬಂದನು. ಇದುರಗಿನ ಮನೆಯ ಮಹಡಿಯ ಮೇಲಿಂದ ಚಂದ್ರಕಾಂತನು ಬಿದ್ದು ಪ್ರಾಣ ಬಿಟ್ಟಿದ್ದನು. ಮಗನ ಮರಣದಿಂದ ತಂದೆ-ತಾಯಿ ಹೆಂಡತಿ ಎಲ್ಲರೂ ಗೋಳೀ ಎಂದು ಅಳುತ್ತಿದ್ದರು. ಚಂದ್ರಕಾಂತನ ಹೆಂಡತಿಯು ರೋದನೆಯನ್ನು ಕೇಳಲು ಯಾರಿಂದೂ ಸಾಧ್ಯವಾಗುತಿರಲಿಲ್ಲ.

ದೇವದಾಸನಿಗೆ ಇದೆಲ್ಲವೂ ವಿಚಿತ್ರವೆನಿಸಿತು. ಚಂದ್ರಕಾಂತನು ಮಹಡಿಯ ಮೇಲಿಂದ ಬಿದ್ದನೇಕೆ? ಅದಾವ ಆಪತ್ತು ಅವನನ್ನು ಆವರಿಸಿತ್ತು. ಸ್ಥಿತಿಯಿಂದ ಶಿರಿವಂತನಿದ್ದು ಸಾಕಷ್ಟು ಉಂಡುಟ್ಟು ಸುಖದಿಂದ ಇದ್ದವನು. ಹೀಗಾಗಲು ಏನು ಕಾರಣ ಎಂಬ ವಿಚಾರಗಳ ತಾಕಲಾಟವು ಅವನನ್ನು ಮುತ್ತಿದವು. ಮನೆಯ ಜನರ ಗೋಳನ್ನು ನೋಡಿ ದುಃಖವು ಉಕ್ಕೇರಿ ಬಂತು. ಪಾಪ ತಾನಾಗಿಯೇ ಪ್ರಾಣ ಕೊಡಬೇಕಾದರೆ ಅದರ ಹಿಂಬದಿಯಲ್ಲಿ ಯಾವದೋ ಒಂದು ದೊಡ್ಡ ದುಃಖವು ಇರಲೇಬೇಕು.

ಹೀಗೆ ವಿಚಾರ ಮಾಡುತ್ತ ಹಾಸಿಗೆಯ ಮೇಲೆ ಒರಗಿದನು ಅಷ್ಟರಲ್ಲಿ ಇಷ್ಟು ಜನರು ಅಳುವದೇಕೆ? "ಕೊಟ್ಟ ದೇವರು ಕಸಿದುಕೊಂಡು ಹೋಗುವಾಗ ಕುಟ್ಟಿಕೊಂಡು ಅಳುವದೇಕೆ ಎಂಬ ದಾಸರ ಪದವು ನೆನಪಾಯಿತು.

ಅಹುದು; ನಿಜ, ದಾಸರು, ಅನ್ನುವದು ನಿಜ, ಮಣ್ಣಿನ ಕಾಯ ಮಣ್ಣಿಗೆ ಹತ್ತು ಸಾವಿರ ವರ್ಷ ಬಾಳಿದರೂ ಪಂಚಮಹಾಭೂತಗಳಿಂದ ನಿರ್ಮಿಸಿದ ಈ ದೇಹ ಪಂಚಮಹಾ ಭೂತಗಳಲ್ಲಿ ಲೀನವಾಗಲೇಬೇಕು. ಎಂದು ಜನ್ಮ ತಾಳಿತು. ಅಂದು ಸಾಯಲಿಕ್ಕೆ ಬಂದಿರುತ್ತದೆ ದೇಹದ

ಬುಡದಲ್ಲಿ ಕತ್ತಲೆ. ನಿರ್ಮಾಣವಾದದ್ದು ನಿರ್ನಾಮವಾಗಲೇಬೇಕು. ಇದು ಸೃಷ್ಟಿಯ ನೇಮ ಕಾಲನ ಚಮತ್ಕಾರ ಮಾನವನ ಬಾಳಿನ ಚಕ್ರ. ಈ ಬಗೆಯಾಗಿ ವಿಚಾರ ಮಾಡಿ ಗಡಿಯಾರದ ಕಡೆಗೆ ನೋಡಿದನು. ಆಗ ಇನ್ನೂ ನಾಲ್ಕು ಬಾರಿಸಿತ್ತು.

ನಾಲ್ಕು ಬಾರಿಸಿತು. ಔಷಧ ತೆಗೆದುಕೊಳ್ಳುವ ವೇಳೆಯಾಯಿತು. ಎಂದು ಔಷಧದ ಕಡೆಗೆ ಕಣ್ಣು ಹೊರಳಿಸಿದೆ. ಆದರೆ ನಾನು ಈ ಔಷಧ ಯಾಕೆ ತೆಗೆದುಕೊಳ್ಳಬೇಕು. ಹುಟ್ಟಿದ ಮನುಷ್ಯನು ಸಾಯಲೇಬೇಕು. ಅಂದ ಮೇಲೆ ನಾನೇಕೆ ಔಷಧ ತೆಗೆದುಕೊಳ್ಳಬೇಕು. ಎಂಬ ವಿಚಾರಗಳು ತಲೆಯಲ್ಲಿ ಸುಳಿಯಹತ್ತಿದವು.

ರಾಮದಾಸರ ಫೋಟೋ ಎದುರಿನಲ್ಲಿತ್ತು. ಅದನ್ನು ದಿಟ್ಟಿಸುತ್ತ ರಾಮ ರಾಮ ಈ ಜಪವು ನೆನಪಿಗೆ ಬಂತು. ಪ್ರತಿಯೊಬ್ಬ ಮಾನವನು ರಾಮ ರಾಮ ಅಂತಾ ಆ ಜಗನ್ನ್ಯಾಮಕನ ಭಜನೆ ಮಾಡುವರು. ಅವನಲ್ಲಿ ಸೇರಲು ಇಚ್ಛಿಸುವರು. ಆದರೆ ಸ್ವಲ್ಪ ಜಡ್ಡು ಬಂದರೆ ತೀರಿತು. ಎಂಬಿ. ಬಿ. ಎಸ್. ವೈದ್ಯನ ಬಳಿ ಸೇರುವರು. ನನ್ನ ಉಳಿಸು ನೀನೇ ದೇವರು ಎಂದು ಮೊರೆ ಹೋಗುವರು. ಆಗ ಇವರ ರಾಮ ಎಲ್ಲಿ? ಎಲ್ಲವನ್ನೂ ತ್ಯಜಿಸಿ ಅವನನ್ನು ಕೂಡಲು ಹಾತೊರೆಯುವಾಗ ಅವನೇ ಕರೆಯಲು ಬಾಗಿಲಿಗೆ ಬಂದರೆ ಉಳಿದುಕೊಳ್ಳಲು ಡಾಕ್ಟರರ ಮನೆಗೆ ಎಡತಾಕುವರು. ಇದು ನಿಜವಾದ ತ್ಯಾಗವೇ? ದೇವಾ ಎಷ್ಟು ಶರೀರದ ಮೇಲೆ ಮೋಹ ಸಾಕು! ಸಾಕು! ಈ ಮೋಹ, ನಾವು ಬದುಕಿಯಾದರೂ ಮಾಡಬೇಕಾದದು ಏನು? ಎಷ್ಟು ದಿನ ಹೆಚ್ಚಿಗೆ ಬದುಕುವೆವೋ ಅಷ್ಟು ಪಾಪವನ್ನೇ ಮಾಡುವೆವು. ಅಂದ ಮೇಲೆ ಈ ಬಾಳಿನಲ್ಲಿ ಸುಖವೇನು? ಅದಕ್ಕಾಗಿ ದಾಸರು ಮರಗುತಿದೆ ಜೀವ.

ಇನ್ನೂ ಎಷ್ಟೋ ಪದ್ಯಗಳನ್ನು ಹೇಳಿದ್ದಾರೆ. ಬಸವಣ್ಣನವರಂತೂ ಅಚ್ಚಕನ್ನಡದಲ್ಲಿ ಮಡಿಕೆಯ ಮಾಡುವರೇ ಮಣ್ಣ ಮೊದಲು.

ಈ ಪದ್ಯದಲ್ಲಿ ಮುಖ್ಯವಾಗಿ ಗುರುವಿನ ಮುಖಾಂತರವಾಗಿ ತಾನು ಯಾರು? ತನ್ನ ಕರ್ತವ್ಯವೇನು? ಇದನ್ನು ತಿಳಿದುಕೊಂಡು, ತನ್ನ ಜೀವನವನ್ನು ಆ ಜಗಧೀಶನಲ್ಲಿ ಲೀನ ಮಾಡಬೇಕೆಂದು, ಹೇಳಿದ್ದಾರೆ.

ನೀನ್ಯಾಕೋ ನಿನ್ನ ಧ್ಯಾನ್ಯಾಕೋ ನಿನ್ನ ನಾಮದ ಬೆಂಬಲ ಒಂದಿದ್ದರೆ ಸಾಕೋ...........

ಅಂತಾ ಪುರಂದರ ದಾಸರು ಮಾರ್ಮಿಕವಾಗಿ ಹಾಡಿದ್ದಾರೆ. ಪ್ರತ್ಯಕ್ಷ ಭಗವಂತನಕ್ಕಿಂತ ಅವನ ನಾಮದ ಮಹಿಮೆಯು ಹೆಚ್ಚಿನದೆಂದ ಮೇಲೆ ಈ ಸಂಸಾರದಲ್ಲಿ ಮಾನವನಿಗೆ ಯಾವದೂ ಅವನ ನಾಮ ಸ್ಮರಣೆಯು ಮುಂದೆ ಸರಿ ಹೋಗಲಾರದು. ಸದಾ ಎನ್ನ ಹೃದಯದಲ್ಲಿ ವಾಸ ಮಾಡೋ ಶ್ರೀಹರೇ.

ಎಂದು ದಾಸರು ಜಗತ್ತಿನಲ್ಲಿರುವ ಹೆಂಡರು ಮಕ್ಕಳು ತಾಯಿ-ತಂದೆ ಎಲ್ಲರಕ್ಕಿಂತ ನಿನ್ನ ಮೂರ್ತಿಯೊಂದು ಧ್ಯಾನವಂದು ನನ್ನ ಹೃದಯ್ರ ಪಟ್ಟದ ಮೇಲೆ ಇರಲೆಂದು ಬೇಡಿಕೊಂಡಿದ್ದಾರೆ. ಜಗನ್ನಾಮಕನ ಚಿತ ಹಾಗೂ ಧ್ಯಾನಗಳಾಗಲಿ, ಹೃದಯ ಮಂಚಿರದಲ್ಲಿದ್ದರೆ ಅಲ್ಲಿ ಪಾಪಕ್ಕೆ ಸ್ಥಾನವಿಲ್ಲ. ಅದರಿಂದ ಪಾಪವು ದೂರು ಹೋಗುವದು. ಮೋಹವು ಮುರಿದು ಚೂರು ಚೂರಾಗುವದು. ಮೋಹವು ಹೋಯಿತೆಂದರೆ ತೀರಿತು. ಮಾನವನು ನಿಜವಾದ ಭಗವದ್ದ ಭಕ್ತನಾಗುವನು. ಅವನಿಗೆ ಜಗತ್ತಿನ ಆಗು ಹೋಗುಗಳು ವಿಚಾರವು ತನ್ನದು ಎಂಬುವ ಮಾಯವು ಹೋಗಿ ಅವನು ತನ್ನ ಜೀವನದ ಸಾರ್ಥಕ್ಯತೆ ಪಡೆಯುವನು. ಆದಕ್ಕಾಗಿ ಮನುಷ್ಯನು ಅವನ ಧ್ಯಾನದಲ್ಲಿರಬೇಕು. ಅವನ ಧ್ಯಾನದಲ್ಲಿದು ಮುಕ್ತಿ ಪಡೆಯುಬೇಕು.

ಮತ್ತೊಂದೆಡೆಗೆ ಕೆಲದಾಸರು ಬೇವು ಬೆಲ್ಲದೊಳಿಡಲೇನು ಫಲ ಹಾವಿಗೆ ಹಾಲೆರೆದರೆ ಏನು ಫಲ ಎಂದು ಹಾಡಿದ್ದಾರೆ. ಜಗತ್ತಿನಲ್ಲಿ ಬೇವು ಎಂಬ ನೀಚ ಮನುಷ್ಯನಿಗೆ ಸಾಧುಗಳ ಕಪನಿಯನ್ನು ತೊಡಿಸಿದರೆ ಅದು ಸಾಧು ಆಗಬಲ್ಲುದೆ ಆ ಜೀವ ಹಾವು ಹಾಲು ಕುಡಿದರೆ ಆದು ವಿಷ ಬಿಡಬಲ್ಲುದೆ ಹಾಗೆ ದುಷ್ಟ ಜೀವಿಗಳಿಗೆ ಅಮೃತಪ್ರಾಯವಾದ ರಾಮನಾಮ ಜಪಿಸೆಂದು ಹೇಳಿದರೆ ಅದು ಜಪಿಸಬಹುದೇ ?

ಈ ಬಗೆಯಾಗಿ ವಿಚಾರಗಳ ತಾಕಲಾಟದಲ್ಲಿ ಮುಳುಗಿದ ದೇವದಾಸನಿಗೆ ಯಾವದೂ ತೋಚದ ದಿಕ್ಕುಗಾಣದವನಾಗಿ ಬಿದ್ದಿದ್ದನು. ಜಗತ್ತಿನಲ್ಲಿ

ಹಣವಿರುವವರೆಗೆ ಹೆಂಡರು ಮಕ್ಕಳು. ಹಣ ತೀರಿದ ಬಳಿಕ ಇವರೆಲ್ಲರೂ ದೂರು. ಅದಕ್ಕಾಗಿ ಪುರಂದರದಾಸರು ಹೆಂಡತಿ ಜೀವಾ ಹೆಂಡತಿ ಅಂತಾ ಬಾಳಿನ ತೊಡಕನ್ನು ಅಜ್ಞಾನಿಗಳಿಗೆ ಹಾಡಿ ತೋರಿಸಿದ್ದಾರೆ.

ಜಗತ್ತಿನಲ್ಲಿ ತಂದೆ ತಾಯಿ ಮಾತ್ರ ಹೆಚ್ಚಿನವರು ಯಾಕೆಂದರೆ ಜನ್ಮ ಕೊಟ್ಟ ತಂದೆ ತಾಯಿಗಳು ತಮ್ಮ ಜೀವನವನ್ನು ನಮಗಾಗಿ ಮುಡಪಾಗಿಟ್ಟು ಭಿಕ್ಷೆ ಬೇಡಿಯಾದರೂ ಹರಿದ ಚಿಂದಿಯ ಬಟ್ಟೆಯಲ್ಲಿ ಸುತ್ತಿ ತಮ್ಮ ಮಡಲಲ್ಲಿ ಹಾಕಿಕೊಂಡು ಸಂರಕ್ಷಿಸುತ್ತಾರೆ. ಅದಕ್ಕಾಗಿ ದಾಸರು ಜಗತ್ತಿನಲ್ಲಿ ತಾಯಿ ತಂದೆಗಳ ಸೇವೆಯನ್ನು ಎಷ್ಟು ಬಗೆಯಾಗಿ ಮಾಡಿದರೂ ತೀರದೆಂದು ತಿಳಿದು ತಾಯಿ ತಂದೆಗಳ ಮರುಗಿಸಿದಾತನು ಕಾಸೀಗೆ ಹೋದರೇನು ಫಲ ಅಂತಾ ಹಾಡಿದ್ದಾರೆ. ಜಗತ್ತಿನಲ್ಲಿ ಆ ಭಗವಂತನಕ್ಕಿಂತ ತಾಯಿಯು ದೊಡ್ಡವಳು. ಅವರು ಮಾಡಿದ ಉಪಕಾರ ಯಾರಿಗೂ ತೀರಿಸಲು ಶಕ್ಯವಿಲ್ಲ. ಕುರುಡ ತಾಯಿ ತಂದೆಗಳ ಸೇವೆಯಲ್ಲಿ ತೊಡಗಿದ್ದ ಪುಂಡಲೀಕ ವಿಠ್ಠಲ ಭೆಟ್ಟಿಗೆ ಬಂದರೂ ತಡೆ ನಿಲ್ಲು ಸೇವೆಯಲ್ಲಿದ್ದೇನೆ ಎಂದು ಇಟ್ಟಂಗಿಯನ್ನು ಕೊಟ್ಟು ನಿಲ್ಲಿಸಿದ್ದು ಇನ್ನೂ ವಿಠ್ಠಲ ಭೂಲೋಕದಲ್ಲಿ ಫಂಡರಪೂರದಲ್ಲಿ ನಿಂತಿದ್ದಾನೆ. ಅಂದ ಮೇಲೆ ಜಗತ್ತಿನಲ್ಲಿ ತಾಯಿ ತಂದೆಗಳ ಹೊರತಾಗಿ ದೊಡ್ಡವರು ಯಾರೂ ಇರುವದಿಲ್ಲ. ಅದಕ್ಕಾಗಿ ಮುಖ್ಯವಾಗಿ ಮಾನವರು ನಾವು ತಂದೆ ತಾಯಿಗಳ ಸೇವೆ ಮಾಡಬೇಕು. ಅದಂತೂ ನನ್ನ ಕೈಯಿಂದ ಸ್ವಲ್ಪವೂ ಸಂಭವಿಸಲಿಲ್ಲ. ಅಂದ ಮೇಲೆ ಈ ಲೋಕದಲ್ಲಿ ನಾನು ಮಾಡಿದ ಪುಣ್ಯವಾದರೂ ಏನು ?

ಪರಸ್ತ್ರೀಯೆಂದರೆ ಅಕ್ಕ ತಂಗಿಯರಂತೆ ತಿಳಿಯಲಿ ಎಂದು ದಾಸರು ಹಾಡುತ್ತಿರುವರು. ನಾನು ಅದನ್ನು ಸ್ವಲ್ಪವೂ ಲೆಕ್ಕಿಸಲಿಲ್ಲ. ಇಳಕೋತ ಬಂದ ಹಾಗೆ ತಿಳಕೋತ ನಡಿಯಿತು. ವೈಕುಂಠ ಉಳಿಯಿತು. ಒಂದು ಹರದಾರಿ ಎಂಬಂತೆ ಜೀವನದ ಕಡೆಯ ಘಳಿಗೆಯಲ್ಲಿ ಈ ಬಗೆಯ ಜ್ಞಾನವು ಉದಯವಾಯಿತು. ದೇವಾ ಇದ್ದ ಬುದ್ಧಿಯನ್ನೆಲ್ಲ ಯಾಕೆ ಮುಸಣಿಸಿದಿ ? ನನ್ನಿಂದಾದ ಪಾಪವೂ ಅಷ್ಟೊಂದು ದೊಡ್ಡದಾವುದಿತ್ತು ?

ರಾವಣನ ಸಂಹಾರಕ್ಕಾಗಿ ಅವನಲ್ಲಿ ಪಾಪ ತುಂಬಲು ಸೀತಾ ಮಾತೆಯ ಅಪಹರಣದ ಸುಖದ ಸ್ವಪ್ನವನ್ನು ಅವನ ತಲೆಯಲ್ಲಿ ಬಿಂಬಿಸಿ ಅವನಲ್ಲಿ ಪಾಪವನ್ನು ತುಂಬಿಸಿ ಅವನನ್ನು ಸಂಹರಿಸಿದೆ.

ಕಂಸ ಮಹಾರಾಜನನ್ನು ಸಂಹರಿಸುವ ಕಾಲದಲ್ಲಿ ಅವನಲ್ಲಿರುವ ಪುಣ್ಯವನ್ನು ಕಡಿಯುವ ಸಲುವಾಗಿ ಅವನಿಂದ ಏಳು ಕೂಸುಗಳನ್ನು ಸಂಹರಿಸಲು ನಾರದನಿಂದ ಉಪದೇಶಿಸಿದರು. ಕಡೆಗೆ ಅವನನ್ನು ಕೃಷ್ಣನಿಂದ ಸಂಹರಿಸಿ ಶಾಂತಿಯು ನೀಡಿದಿ.

ಭಸ್ಮಾಸುರನಿಗೆ ಶಂಕರನಿಂದ ವರವು ಕೊಡಿಸಿ ಜನರ ಭಸ್ಮ ಮಾಡಿ-ಸಿದಿ, ಹಾಗೆ ಅವರಿಂದ ಅವನ ಪಾಪವು ತುಂಬಿದ್ದಕ್ಕೆ ಶಂಕರನನ್ನು ಜಯಿಸುವ ಇಚ್ಛೆಯನ್ನು ಕೊಟ್ಟು ನೀನೇ ಮೋಹಿನಿಯ ರೂಪಗೊಂಡು ಅವನನ್ನು ಭಸ್ಮ ಮಾಡಿಸಿದಿ ದೇವಾ ಎಷ್ಟೊಂದು ನಿನ್ನ ಮಹಿಮೆಯು

ಜಗದ ಜನರಿಗೆ ನೀನೆ ದೇವರು ನನ್ನನ್ನೇ ಪೂಜಿಸಿರಿ. ಓಂ ನಮೋ ಹಿರಣ್ಯಾಯನಮಃ ಅನ್ನಲು ಜನತೆಯ ಮೇಲೆ ಬಲತ್ಕಾರ ಮಾಡಿ ಜನರನ್ನು ಹಿಂಸಿಸಿ ದೇವತೆಗಳ ಮೇಲೆ ದಾಳಿ ಮಾಡಿ ಅಷ್ಟದಿಕ್ ಪಾಲಕರನ್ನೇ ಜಯಿಸಿ ಸರ್ವೇಶ್ವರ ತಾನೆಂದು ಬಗೆದು ಶ್ರೀಹರಿ ನನಗಂಜಿ ಅಡಗಿದನೆಂದು ಸಾರುವ ಅಸುರರನ್ನು ಸಂಹರಿಸುವ ಸಲುವಾಗಿ ಅವನ ಉದರದಲ್ಲಿಯೇ ( ಜನ್ಮ) ಮಾರುತಿಗೆ ಜನ್ಮ ಕೊಟ್ಟು ಅವನಿಂದ ಶ್ರೀಹರಿಯ ಮಹಿಮೆಯನ್ನು ಭೋಧಿಸಿದಿ ಅದು ಸಾಗದಕ್ಕೆ ಕಡೆಗೆ ಅವನಿಗೆ ನೀಡಿದ ವರಕ್ಕನ ಗುಣವಾಗಿ ಅವನನ್ನು ಸಂಹರಿಸಿದಿ. ದೇವಾ ಅದಾರ ಈ ದೃಷ್ಟಿಯಲ್ಲಿ ನಿನ್ನ ವಿರುದ್ಧ ಈಸಬಲ್ಲರು. ಈಶ ಇಚ್ಛೆಯ ವಿರುದ್ಧ ಈಸಲು ಯಾರಿಗೆ ಸಾಧ್ಯ.

ದೇವಾ ಯಾವದನ್ನು ನಿನ್ನ ಮೇಲೆ ಹಾಕಿಕೊಳ್ಳದೆ ವಿಧಿಯೆಂಬ ಚಕ್ರವು ಸರ್ವರಿಗೂ ಇದೆ. ಅದು ಒಂದು ಬೇರೆ. ಶಕ್ತಿಯೆಂದು. ತೋರಿಸುವದಕ್ಕಾಗಿ ಶಮಂತಕದ ಅಪವಾದ ಹೊತ್ತೆ.

ಪಿತನ ವಚನ ಪಾಲನಕ್ಕಾಗಿ ೧೪ ವರುಷ ಕಾಡು ತಿರುಗಿ ಅಹಲ್ಯಾ ಶಬರಿಯರನ್ನು ಉದ್ಧರಿಸಿದೆ. ದೇವಾ ಅದಾವದು ನಿನಗೆ ಅಶಕ್ಯವಿತ್ತು ಈ ಧರಣಿಯಲ್ಲಿ.

ದೇವಾ ನಿನ್ನ ಕೈಯಲ್ಲಿ ಎಲ್ಲವೂ ಇದ್ದರೂ ವಿಧಿಯು ಮಾತ್ರ ಬೇರೆಯಿದೆ. ಅದರ ಇಚ್ಛೆಯಂತೆ ನಾವೆಲ್ಲರೂ ನಡೆಯಬೇಕಾಗುವದು.

ಅದಕ್ಕಾಗಿ ನೀನು ಎಲ್ಲವನ್ನು ನಿನ್ನ ಮೇಲೆ ಹಾಕಿಕೊಳ್ಳದೆ, ಅವರವರ ಪಾಪ ಪುಣ್ಯ ಅವರ ಸಂಗಡ ಎಂದು ಹೇಳಿರುವೆ. ದೇವಾ ನೀನು ಯಾವದನ್ನು ನಿನ್ನ ಮೇಲೆ ಹಾಕಿಕೊಳ್ಳದೆ ಆ ವಿಧಿಯ ನಿಯಮವು ಅದು ಅವರವರ ಪಾಪಕ್ಕೆ ತಕ್ಕಂತೆ ಪ್ರಾಯಶ್ಚಿತ್ ನೀಡುವದು ಎಂದು, ವೇದೋಕ್ತಿಯಿದೆ.

ದೇವಾ ಮಾನವರಾದ ನಾವು ನಮ್ಮ ಪಾಪ ಪುಣ್ಯಗಳನ್ನು ಗಳಿಸಲು ವಿವೇಕವನ್ನು ನೀಡಿರುವೆ. ಅದರಿಂದ ನಮ್ಮ ದೈವವನ್ನು ನಮ್ಮ ವಿಧಿಯ ಚಿತ್ರವನ್ನು ನಾವು ಬದಲಿಸಲು ಶಕ್ಯವಿದೆಯೆಂದು ತೋರಿಸುವ ಸಲುವಾಗಿ ಮಾರ್ಕಂಡೆಗೆ ನೀಡಿದ ೧೬ ವರುಷವನ್ನು ಅವನ ತಪಶ್ಚರ್ಯಕ್ಕಾಗಿ ಹೆಚ್ಚಿಸಿದಿ.

ಸತ್ಯವಾನನ ೧೬ ನೂರು ವರುಷದ ಆಯುಷ್ಯವನ್ನು ಸಾವಿತ್ರಿಯ ಪತಿವ್ರತಾ ಮಹಿಮೆಯಿಂದ ಅವನ ಆಯುಷ್ಯವನ್ನು ಬೆಳಸಿದೆ.

ಅಂದ ಮೇಲೆ ಮಾನವನಿಗೆ ತನ್ನ ವಿಧಿಲಿಖಿತ ಬರೆದುಕೊಳ್ಳುವದು ತನ್ನ ಕೈಯಲ್ಲಿದೆಯೇ

ಪಾಂಡವರು ಸಾಕಷ್ಟು ಧರ್ಮದಿಂದ ರಾಜ್ಯ ನಡಿಸಿದಾಗ ಅವರಿಗೆ ಪಗಡೆಯ ಜೂಜಿನಲ್ಲಿ ಸೇರಲು ಮನಸ್ಸುಗೊಟ್ಟು ಕೌರವರಿಂದ ಹಿಂಸೆಯನ್ನು ಕೂಡಿಸಿ ಅವರಲ್ಲಿ ಪಾಪ ತುಂಬಿಸಿ ಅವರನ್ನು ಪಾಂಡವರಿಂದ ನಾಶಪಡಿಸಿದಿ. ಮತ್ತು ಇದರಲ್ಲಿ ಪಾಂಡವರಿಗೆ ೧೪ ವರುಷ ವನವಾಸವನ್ನು ೧ ವರುಷ ಅಜ್ಞಾತವಾಸವನ್ನು ನೀಡಿ ಅವರ ವಿಧಿಲಿಖಿತವೆಂದು ಸಮಾಜಕ್ಕೆ ತೋರಿಸಿಕೊಟ್ಟೆ. ಅಂದ ಮೇಲೆ ದೇವಾ ನಿನ್ನ ವ್ಯವಹಾರದಲ್ಲಿ ಯಾವದು ಹೇಗೆಯೆಂಬ ಅರಿಯುವ ಜ್ಞಾನ ಈ ಅಜ್ಞಾನಿ ಜನಕ್ಕೆ ಇಲ್ಲವಲ್ಲಾ. ದೇವಾ ನಿಜವಾಗಿ ಈ ಜಗತ್ತಿನಲ್ಲಿ ನಾನು ಇರುವವರಗೆ ನನಗೆ ಯಾರು ನನ್ನ ಕಾರ್ಯವೇನು? ಎಂಬ ತಿಳುವಳಿಕೆಯ ಜ್ಞಾನವನ್ನು ದಯಪಾಲಿಸು.

ದೇವಾ! ಕರ್ಮಣ್ಯೇ ವಾಧಿಕಾರಸ್ತೆ ಮಾ ಫಲೇಷು ಕದಾಚನ ಎಂಬುದನ್ನು ನೀನು ಗೀತೆಯಲ್ಲಿ ಹೇಳಿದ್ದು ನನಗೆ ಧ್ಯಾನದಲ್ಲಿದೆ ದೇವಾ!

ನಾನು ಮರೆತೆನೆಂದು ತಿಳಿಯದಿರು. ನಾನು ಮಾಡುವ ಕಾರ್ಯದಲ್ಲಿ ಫಲದ ಅಪೇಕ್ಷೆ ಎಳ್ಳಷ್ಟು ಇಲ್ಲ. ಆದರೆ ನಾನು ಮಾಡಬೇಕಾದ ಕಾರ್ಯದ ರೀತಿ ಯಾವದು? ಅದನ್ನು ನಾನು ಮಾಡುವ ಬಗೆ ಹೇಗೆ? ಎಂಬದರ ಅರಿವಿನ ಹೊರೆಯನ್ನು ಸರಿಯಾಗಿ ತಿಳಿಸು. ಅಥವಾ ಅದರ ಜ್ಞಾನ ವನ್ನಾದರೂ ದಯಪಾಲಿಸು. ಅಂದರೆ ನೀ ನೀಡಿದ ವಚನಗಳ ಮರ್ಮ ವನ್ನು ಅರಿತು ಸಾಗುವೆ.

ಅರಿವು ಎಂದ ಕೂಡಲೆ ಮಾನವನಿಗೆ ತನ್ನ ಅರಿವೆ ತನಗೆ ಗುರು ಈ ಶಬ್ದವನ್ನು ಬಾಲ ವೀರ ಏಕಲವ್ಯನು ತನ್ನ ಅರಿವಿನಿಂದ ದ್ರೋಣಾ ಚಾರ್ಯರ ಮೂರ್ತಿಯ ಮುಂದೆ ಬಾಣ ವಿದ್ಯವನ್ನು ಕಲಿತು ಜಗತ್ತಿಗೆ ಹೆಸರುವಾಸಿಯಾದನು. ಆದ್ದರಿಂದ ಅಂಥ ಅರಿವನ್ನಾದರೂ ನೀಡಿ ಈ ದೀನ ಅನಾಥನನ್ನು ಕಾಪಾಡು.

ದೇವಾ ನಿನಗೆ ನಾನು ಕಾಪಾಡು ಅಂತಾ ಬೇಡಿಕೊಂಡೆನಲ್ಲಾ ನನ್ನನ್ನು ನೀನು ಏತಕ್ಕಾಗಿ ಕಾಪಾಡಬೇಕು. ನಾನು ಬದುಕಿ ಯಾರಿಗಾಗಿ ಬಾಳಬೇಕಾಗಿದೆ. ಯಾರ ಬಾಳ್ಗಲ್ಲಿ ಬೆಳಕನ್ನಿಡಬೇಕಾಗಿದೆ. ನನಗೆ ಯಾವದೂ ಬೇಡ. ನಿನ್ನ ಧ್ಯಾನ, ನಿನ್ನ ನಾಮ, ಭಜನೆ ಅದರಲ್ಲಿಯೇ ಒಂದ ಬಗೆಯ ಆನಂದವಿದೆ.

೨

ಆನಂದ! ಆನಂದ! ಎಲ್ಲಿದೆ ಆನಂದ? ಎದೆಯುರಿಯುವಂಥ ಪ್ರಸಂಗ ದೇವಾ ಪ್ರತಿ ಘಳಿಗೆಯಲ್ಲಿಯೂ ನಿನ್ನ ವಿಷವನ್ನೇ ಉಣ್ಣಿಸುವೆ ಯಲ್ಲಾ. ಇಲ್ಲಿಯ ವರೆಗೆ ಆದರೆ? ಈಗ ನಾನು ಯಾರು? ಎಂಬದರ ಅರಿವಿನಿಂದ ಒಂದು ಬಗೆಯ ಆನಂದವಾಯಿತಲ್ಲ. ಈ ಬಗೆಯ ಶರೀರದ ಯಾತನೆ ಒಂದೆಡೆ ಪ್ರಪಂಚದ ಖರ್ಚಿನ ಯಾತನೆ ಮತ್ತೊಂದೆಡೆಯಿಂದ ವಿಚಾರ ಮಾಡುತ್ತಿರುವಾಗಲೇ ಆಶಾಳ ಫೋಟೋದ ಕಡೆಗೆ ಲಕ್ಷ ಹೋಯಿತು. ಪತಿ ಭಕ್ತಳಾದ ಆಶಾ ವಚನ ಸಾಹಿತ್ಯದ ಅಡಿಗಲ್ಲು, ಆಶಾ ಪತಿವ್ರತಾ ಶಿರೋಮಣಿ, ಆಶಾ ಆದರೆ ಇವಲ್ಲ ನಿಜ. ನೀಚ ತಾಯಿ ಯಾದ ಹಣದ ಗೊಂಬೆಯಂತಿರುವ ತನ್ನ ತಾಯಿಯ ಬೆನ್ನು ಹತ್ತಿ

ಹಣಕ್ಕಾಗಿ ಈ ಸ್ಥಿತಿಯಲ್ಲಿ ನನ್ನನ್ನು ಬಿಟ್ಟು ಹೋದಳಲ್ಲಾ. ನಾನು ಇನ್ನು ಯಾತಕ್ಕೆ ಮರುಗಬೇಕು. ಹೆಂಡರು ಮಕ್ಕಳು ಅಂತಾ ಅಲ್ಲವೇ? ಹುಟ್ಟಿದ ಮಕ್ಕಳಂತೂ ಮಣ್ಣು ಪಾಲಾಗಿ ಹೋದವು. ಇನ್ನು ಉಳಿದ ಒಂದು ಜೀವ ಆಶಾ ಅವಳಾದರೂ ಬಿಟ್ಟು ಹೋದಳು. ಇಷ್ಟೇ ಅಲ್ಲದೆ ತನ್ನ ದಾರಿ ತಾ ಕಂಡಳು. ಅಂದ ಮೇಲೆ ಇನ್ನು ನಾನು ಯಾರಿಗಾಗಿ ಚಿಂತಿಸಲಿ? ಈ ಔಷಧ ತೆಗೆದುಕೊಂಡು ನೆಟ್ಟಗಾಗಿ ಈ ಪ್ರಪಂಚದ ವ್ಯಾಮೋಹದಲ್ಲಿ ಯಾಕೆ ಬೀಳಲಿ? ಹೇ ಭಗವಾನ! ನಿನ್ನನ್ನೇ ನಾನು ನಂಬಿರುವೆ ನನ್ನನ್ನು ನೀನು ಯಾವ ದಾರಿಗೆ ಕರೆದೊಯ್ಯುವೆ ಒಯ್ಯು ಸರ್ವ ದಾರಿಗಳಿಗೂ ನಾನು ಸಿದ್ಧನಿದ್ದೇನೆ. ನನಗಾಗಿ ಯಾರಿಲ್ಲ, ಯಾರಿಗಾಗಿ ನಾನಿಲ್ಲ. ಅಂದ ಮೇಲೆ ನಾಳೆ ನಾನು ಸಾಯುವಾಗ ಯಾರಿಗಾಗಿ ಚಿಂತಿಸಿ ಆಶೆಯನ್ನಿಡಲಿ. ಆನಂದದಿಂದ ನೀನು ಕರೆಯು ಬಂದಾಗ ಬರುವೆನು. ದೇವಾ ಇದೊಂದು ಬಗೆಯಾಗಿ ಪರಿಸ್ಥಿತಿಯನ್ನೇ ತಂದು ನನ್ನನ್ನು ಎಚ್ಚರಿಸಿದಿ ಇಲ್ಲದಿದ್ದರೆ, ಈ ಸಂಕಟ ಬಾರದಿದ್ದರೆ ವೈಕುಂಠ ರಮಣ ಅನ್ನುವ ಕಾಲವೂ ಒದಗುತ್ತಿದ್ದಿಲ್ಲ. ಸಮಯಕ್ಕೆ ಸರಿಯಾಗಿ ನನ್ನನ್ನು ಎಚ್ಚರಿಸಿದೆ. ನಾನು ಧನ್ಯನು ದೇವಾ! ನಿನ್ನ ನಾಮದ ಬಲದಲ್ಲಿಯೇ ನಿಜವಾದ ಆನಂದವಿದೆ.

ಈ ಬಗೆಯಾಗಿ ದೇವದಾಸನು ವಿಚಾರ ಮಾಡುತ್ತ ಹಾಸಿಗೆಯಿಂದ ಎದ್ದು ಎಲ್ಲ ಔಷಧ ಬಾಟಲಿಗಳನ್ನು ತಿಪ್ಪೆ ಕಾಣಿಸಿದನು. ವಿಶ್ವವು ನೀಡಿದ ಈ ಪಂಚಜನ್ಯವಾದ ವಸ್ತುಗಳಿಂದಲೇ ನನಗೆ ಸುಖ ಅಥವಾ ದುಃಖವಾಗಬೇಕು ಈ ಕೃತ್ರಿಮ ವಸ್ತುಗಳು ನನಗೆ ಬೇಡವೆಂದು ವಿಚಾರ ಮಾಡಿದನು.

ಈ ಬಗೆಯ ವಿಚಾರದ ತಾಕಲಾಟದಲ್ಲಿಯೇ ಹಾಸಿಗೆಯಿಂದ ಎದ್ದು ಬಾಗಿಲ ತೆರೆದು ದೇವದಾಸನು ಎದ್ದು ಹೋದನು. ಯಾರಿಗೂ ತಿಳಿಯಲಿಲ್ಲ. ಆದರೆ ಅವನ ಬಾಯಿಂದ 'ಯಾರಿಗೋ ಯಾರೋ ಎರವಿನ ಸಂಸಾರ' ಎಂಬ ಪದ್ಯವು ಹೊರಸೂಸುತ್ತಿತ್ತು.

— —

# ೩ ಪ್ರಪಂಚದ ಪರಿತಾಪ

“ ಬಿನಾ...........ಬಿನಾ...........ಬಿನಾ ” ಎಂದು ಶಾಮರಾಯರು ಬಾಗಿಲ ಬಳಿಯಲ್ಲಿ ಕೂಗುತ್ತಾ ನಿಂತಿದ್ದಾರೆ. ಬಿನಾ ಹಿತ್ತಲಲ್ಲಿ ಕೆಲಸಕ್ಕೆ ನಿಂತ ವಿಜಯಳ ಕೂಡ ಮಾತಾಡುತ್ತ ನಿಂತಿದ್ದಾಳೆ. ವಿಜಯಳ ಕರುಣ ಕಥೆಯು ಬಿನಾಳನ್ನು ಮುಗ್ಧ ಮಾಡಿದೆ. ಅವಳ ದುಃಖದಲ್ಲಿ ತಾನೂ ಭಾಗಿಯಾಗಿ ಕಣ್ಣೀರನ್ನು ಕಾಲುವೆಯಾಗಿ ಹರಿಸ ಹತ್ತಿದ್ದಾಳೆ. ವಿಜಯಳ ದುಃಖಮಯವಾದ ಕರುಣ ಕಥೆಯು ಬಿನಾಳ ಹೃದಯವನ್ನೇ ಕೊರೆಯತೊಡಗಿತು. ನಿಜವಾಗಿ ಬಿನಾಳು ಕರುಣೆಯ ಮೂರ್ತಿ. ಏನೂ ಅರಿಯದ ಮುಗ್ಧ ಗೃಹಿಣಿ. ಜಗತ್ತಿನ ಸುಖ ದುಃಖ ಗಳ ಅರಿವಿಲ್ಲದ ಆಗರ್ಭ ಶ್ರೀಮಂತನ ಮಗಳು. ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುವ ಗಂಡನ ಕೈಗೊಂಬೆ ಅಂಪ ವೇಲೆ ಜೀವನದ ಸುಖ ದುಃಖದ ಕಲ್ಪನೆ ಎಲ್ಲಿ ಬರಬೇಕು. ಕಾಲಚಕ್ರದ ದವಡೆಯಲ್ಲಿ ಶಿಲುಕಿ ಬಳಲುವ ಮಾನವರ ಜೀವನದ ದಿನಚರಿಯು ಅವಳಿಗೇನು ಗೊತ್ತು? ಕಣ್ಣೀರನ್ನು ಒರೆಸುತ್ತ “ನಾಳೆಯಿಂದ ನಮ್ಮಲ್ಲಿಯೇ ಕೆಲಸಕ್ಕೆ ನಿಲ್ಲು, ನೀನು ಇನ್ನು ಯಾರಿಗೂ ಅಂಗಲಾಚಬೇಡ. ನನ್ನ ಮನೆಯಲ್ಲಿ ನಾನೊಬ್ಬಳು ನನ್ನ ಯಜಮಾನರೊಬ್ಬರು ನಮ್ಮಿಬ್ಬರನ್ನು ಬಿಟ್ಟರೆ ಬೇರೆ ಯಾರೂ ಇಲ್ಲ. ನನಗೂ ಮೈಯಲ್ಲಿ ಅಸ್ತವ್ಯಸ್ತ. ಮೇಲಾಗಿ ನೀನೂ ನಮ್ಮ ಜಾತಿಯವಳು ಎಲ್ಲವನ್ನೂ ಮಾಡಿಕೊಂಡು ಹೋಗು. ನಾನು ನಿನ್ನನ್ನು ನೋಡಿಕೊಂಡು ಹೋಗುವೆನು; ನಾಳಿನ ದಿವಸ ಬಾ” ಎಂದು ಹಿತ್ತಲ ಬಾಗಿಲವನ್ನು ಮುಚ್ಚುವಷ್ಟರಲ್ಲಿ ಹೊರಗಡೆಗೆ ಶಾಮರಾಯರು ಅತಿ ಉದ್ವೇಗದಿಂದ “ಬಿನಾ........ಬಿನಾ ಬಾಗಿಲ ತೆರೆ” ಎಂದು ಗಂಟಲು ಹರಿಯುವಂತೆ ಕಿರಚಿದರು.

ಇಷ್ಟು ರೌದ್ರವನ್ನು ಬಿನಾ ಎಂದೂ ಕಂಡಿದ್ದಿಲ್ಲ. ಮನವಾರೆ ಅತ್ತು ಕಣ್ಣು ಗುಲಗಂಜಿಯಂಥ ಕೆಂಪಗೆ ಮಾಡಿಕೊಂಡು ಇನ್ನೂ ಮುಳು ಮುಳು ಅಳುವದರಲ್ಲಿಯೇ ಕರುಣವಾದ ಹೃದಯದ ಮೂರುತಿಯಾದ ಬಿನಾಳು ಅತಿ ವೇಗವಾಗಿ ಕಣ್ಣು ಒರೆಸಿಕೊಳ್ಳುತ್ತ ಬಾಗಿಲ ಬಳಿಯಲ್ಲಿ ಬಂದು

ಬಾಗಿಲ ತೆರೆದಳು. ದಿನಾಲು ಹಸನ್ಮುಖಿಯಾಗಿ ಬಾಗಿಲ ತೆರೆಯುವ ಬಿನಾಳ ಕಣ್ಣಲ್ಲಿ ನೀರೇಕೆ? ಎಂದು ಶಾಮರಾಯರು ದಿಕ್ಕುಗಾಣದವ ರಾದರು. "ಯಾಕೆ ಬಿನಾ, ಅಳುವೆ? ಏನಾಗಿದೆ? ಮೈಯಲ್ಲಿ ಸರಿಯಿ ಲ್ಲವೇ?" ಎನ್ನುತ್ತ ಬೂಟು ಬಿಚ್ಚಿ ಪಡಸಾಲೆಯಲ್ಲಿ ಖುರ್ಚಿಯ ಮೇಲೆ ಬಿನಾಳನ್ನು ಹಿಡಿದುಕೊಂಡು ಕುಳಿತು ಕಣ್ಣು ಒರೆಸುತ್ತ ಏನಾಯಿತು? ಪತ್ರ ಬಂದಿದೆಯೇ? ತವರೂರ ನೆನಪೇ? ಬಾಯಿ ಬಿಚ್ಚಿ ಹೇಳು. ಯಾಕೆ ಅಳುವೆ? ಏನಾಗಿದೆ? ಏನು ಬೇಕಾಗಿದೆ? ಎಂದು ಮಗುವನ್ನು ಸಂತೈಸುವಂತೆ ಬಹು ಮುಖವಾಗಿ ಸಂತೈಸಹತ್ತಿದರು. ಆದರೆ ಬಿನಾಳ ದುಃಖವು ಕಡಿಮೆಯಾಗಲಿಲ್ಲ.

"ನನಗೆ ಯಾರೂ ಏನೂ ಅನ್ನಲಿಲ್ಲ. ಆದರೆ ದುಃಖ ಜೀವನದ ಕರುಣ ಕಥೆಯನ್ನು ಕೇಳಿ ಅವಳ ಜೀವನದ ನೆನಪನ್ನು ನೆನೆದು ಹೃದಯ ಕರಗಿ ನೀರಾಗಿ ಕಣ್ಣಿನಿಂದ ಹರಿಯಹತ್ತಿದೆ.

"ಇಷ್ಟೇ ಅಲ್ಲವೇ? ಅವಳಿಗೆ ಏನಾದರೂ ಸ್ವಲ್ಪ ಕೊಟ್ಟರಾಯಿತು. ಸಂತೈಸಿದರಾಯಿತು, ಅಳುವಿಯೇಕೆ?"

"ಸಂತೈಸಿದೆ. ಆದರೆ ನಾಳೆ ಆಕೆಗೆ ಕೆಲಸಕ್ಕೆ ನಿಲ್ಲಲು ಇಲ್ಲೇ ಇರಲು ಹೇಳಿದ್ದೇನೆ. ನಿಮ್ಮದೊಂದು ಪರವಾನಗಿ ಸಿಕ್ಕರಾಯಿತು."

"ಇಷ್ಟೇ ಹೌದಲ್ಲೋ! ತೆಗೆದುಕೋ ಪರವಾನಗಿ"ಯೆಂದು, ಬಿನಾ ಳನ್ನು ಬಾಹುಗಳಿಂದ ಬಿಗಿದು ಪರವಾನಗಿಯ ಮುದ್ರೆಯನ್ನು ಅವಳ ಕೋಮಲವಾದ ಕಪೋಲಗಳ ಮೇಲೆ ಒತ್ತಿದನು.

ಬಿನಾಳು ದಣಿದ ಮನಸ್ಸಿನಿಂದ ಭಾರವಾದ ಶರೀರದಿಂದ ಶಾಮ ರಾಯರ ಬಾಹು ಪಾಶಗಳಿಂದ ಮುಕ್ತಳಾಗಿ ಪತಿಯ ಕೋಟನ್ನು ಕಳ ಚಿಕೊಂಡು ಅದನ್ನು ಅಲ್ಲಿಯೇ ಒಂದು ಗೂಟಕ್ಕೆ ತೊಡರಿಸಿದಳು. ಮುಖ ಮಾರ್ಜನೆಗಾಗಿ ಬಾಥ್‌ರೂಮಿಗೆ ಶಾಮರಾಯರನ್ನು ಕರೆದುಕೊಂಡು ಹೋಗಿ ನೀರಿಸ್ನಿಟ್ಟಳು.

ಬಿನಾಳು ಚಹ ಮಾಡಿ ಪಡಸಾಲೆಯಲ್ಲಿ ತೆಗೆದುಕೊಂಡು ಬಂದಾಗ ಶಾಮರಾಯರು ಟಾವೆಲದಿಂದ ಮುಖವನ್ನು ಒರೆಸಿಕೊಂಡು ಕನ್ನಡಿ

ಯನ್ನು ನೋಡಿಕೊಳ್ಳುತ್ತಿದ್ದರು. ಬಿನಾಳು ಚಹದ ಕಪ್ಪನ್ನು ತೆಗೆದು ಕೊಂಡು ಬಂದು "ಮೊದಲು ಚಹಾ ತೆಗೆದುಕೊಳ್ಳಿರಿ, ಆ ಮೇಲೆ ನೋಡಿ ಕೊಳ್ಳಿರಂತೆ. ತಾವು ರೂಪದಲ್ಲಿ ಕಾಮನೆಂದೇ ನಾನು ಮಾಲೆ ಹಾಕಿ ದ್ದೇನೆ." ಎಂದು ನಗೆಯನ್ನು ತೂರಿದಳು. ಇಬ್ಬರೂ ನಗೆಯಲ್ಲಿ ಮುಳುಗಿ ಚಹ ಕುಡಿದು ವೀಳ್ಯ ಮೆಲ್ಲುತ್ತಾ "ಬಿನಾ ನೀನು ಕೇಳಿದ ಕರುಣ ಕಥೆಯನ್ನು ನನಗೂ ಸ್ವಲ್ಪ ಹೇಳುವಿಯಾ? ಅವಳು ಯಾರು? ಎಲ್ಲಿಯವಳು? ನಿನಗೆ ಇಷ್ಟು ದುಃಖವಾಗಲು ಅದೆಂಥ ಅದ್ಭುತ ಕಥೆ ಯಿರಬಹುದು. ನನಗೂ ಸ್ವಲ್ಪ ಅದನ್ನು ಹೇಳುವಿಯಾ?"

ಪತಿಯ ಮಾತು ಕೇಳಿ ಬಿನಾಳಿಗೆ ಮರಿತ ಕರುಣ ಕಥೆಯ ದುಃಖವು ಮತ್ತೆ ನೆನಪಾಗಿ ಕಣ್ಣು ಕೆಂಪಗಾಗಿ ನೀರೊಡೆದವು. "ನನಗೆ ಆ ಪುಣ್ಯಾತ್ಮಳ ಕಥೆಯನ್ನು ಹೇಳಲು ಹೃದಯದಲ್ಲಿ ಶಕ್ತಿಯಿಲ್ಲ. ಅದನ್ನು ನಾಳೆ ಕೆಲಸಕ್ಕೆ ಬಂದಾಗ ಅವಳಿಂದಲೇ ಕೇಳಿ. ನನ್ನ ಬಾಯಿಂದ ಹೇಳಲು ನನಗೆ ಆಗದು" ಎಂದು ದುಃಖಿಸಹತ್ತಿದಳು. ಬಿನಾಳ ಮನಸ್ಸು ಒಂದು ಮಗುವಿನ ಹಾಗೆ ಜಗದ ದುಃಖದ ಅರಿವು ಇಲ್ಲದ ಮುಗ್ಧಳು. ಅದಕ್ಕಾಗಿ ಶಾಮರಾಯರು ಹೆಂಡತಿಯನ್ನು ಸಂತೈಸುತ್ತ "ಬಿನಾ........ ದುಃಖಿಸದಿರು, ಯಾರ ಕಷ್ಟಕ್ಕೆ ಯಾರು ದುಃಖಿಸಬೇಕು? ಅವಳು ಮಾಡಿದ ಪಾಪದ ಪ್ರಾಯಶ್ಚಿತ ಅವಳನ್ನು ಕಷ್ಟದಲ್ಲಿ ನೂಕಿದೆ. ನೀನೇಕೆ ಚಿಂತಿಸುವೆ? ದುಃಖಿಸುವೆ? ಸೈರಿಸು. ಹೇಳು, ಅವಳ ಕಥೆಯನ್ನು ಹೇಳು. ದುಃಖಿಸದಿರು" ಎಂದು ಸಂತೈಸುತ್ತ ಶಾಮರಾಯರು ಬಿನಾಳ ತಲೆಗೂದಲನ್ನು ನೇವರಿಸಹತ್ತಿದರು.

ಬಿನಾಳು ಕಣ್ಣು ಒರೆಸುತ್ತ, ಸೆರಗಿನ ತುದಿಯಿಂದ ಮೂಗು ಒರೆ ಸುಕೊಳ್ಳುತ್ತಾ "ನೋಡಿ, ಪಾಪ ಬಹಳ ಒಳ್ಳೆಯವಳು, ಜಾತಿ ಯಿಂದ ಬ್ರಾಹ್ಮಣಳಂತೆ. ನೋಡಲು ನಿಡಿದಾದ ಮೂಗು, ಕೆಂಪೇರಿದ ಕಪೋಲ, ಕಾಮನ ಬಿಲ್ಲಿನಾಕಾರದ ಹುಬ್ಬುಗಳು, ಹಾಗೂ ಅವಳ ರೂಪ, ಅವಳ ಮಾತುಗಳಿಂದ ಅವಳೂ ಓರ್ವ ಸಿರಿವಂತ ಮನೆತನದ ಸೊಸೆ ಯಾಗಿದ್ದಂತೆ ತೋರುವಳು. ಅವಳ ಮುಖವನ್ನು ನೋಡಿದ ಕೂಡಲೇ ಶಾಂತಿಯೇ ಅವಳಲ್ಲಿ ಕಾಲು ಮುರಿದುಕೊಂಡು ಬಿದ್ದಂತೆ ತೋರುವದು.

ಅವಳ ಮಾತನ್ನು ಕೇಳುವಾಗ ನನ್ನ ಎದೆಯು ಕರಗಿ ನೀರಾಗಿ ಕಣ್ಣಲ್ಲಿ ಹರಿಯಿತು. ನಾಥಾ! ಜಗತ್ತಿನಲ್ಲಿ ಯಾರಿಗೂ ಇಂಥ ಪರಿಸ್ಥಿತಿಯು ಬರಬಾರದು. ನಾಳೆ ಅಕಸ್ಮಿಕ ನಮಗೇ ಏನಾದರೆ?'' ಎಂದು ಗಂಟಲು ತುಂಬಿ ಬಂದು ಬಿಕ್ಕುತ್ತ ಶಾಮರಾಯರ ತೊಡೆಯಲ್ಲಿ ಮುಖ ಮುಚ್ಚಿ ಕೊಂಡು ಗೋಳೋ ಎಂದು ಅತ್ತಳು. ಶಾಮರಾಯರು "ಬಿನಾ...... ಯಾರ ಪರಿಸ್ಥಿತಿ ನೋಡಿ ಅಳುವಿ? ಹೆದರುವಿಯೇಕೆ? ಕಾಯುವವ ಪರಮಾತ್ಮನಿದ್ದಾನೆ. ದುಃಖಿಸದಿರು, ನನಗೆ ಮೊದಲು ಆ ಅಭಾಗಿನಿಯ ಜೀವನ ಚರಿತ್ರೆಯನ್ನು ಹೇಳು" ಬಿನಾ ಕಣ್ಣು ಒರೆಸಿಕೊಳ್ಳುತ್ತ ಪತಿ ಯೆದುರಿನಲ್ಲಿ ಕುಳಿತು ತನ್ನ ಹೃದಯಕ್ಕೆ ಶಕ್ತಿ ತಂದುಕೊಂಡು ನಾಥಾ! ಕೇಳು ಎಂದಳು.

"ಇದೇನು ಬಿನಾ; ನಾಥಾ! ಎಂಬ ನಾಟಕದ ಶಬ್ದ ಉಪಯೋಗಿಸಿ ನಾಟಕವನ್ನೇ ಸುರುವು ಮಾಡಿದಿಯಾ? ಅಥವಾ ನಿನ್ನ ಮೈಸೂರ ಶಿಕ್ಷಣದ ಪ್ರಭಾವವನ್ನೇ ನನ್ನ ಮೇಲೆ ಬೀರುವಿಯಾ? ಅಥವಾ ಸಾಹಿತ್ಯ ಸುಧೆಯ ಅಮೃತ ಪಾನ ಮಾಡಿಸುವಿಯಾ? ಹೇಳು ನಿನ್ನ ಪ್ರತಿಯೊಂದು ವಾಕ್ಯ ಗಳು, ಶಬ್ದಗಳು, ಶಾಸ್ತ್ರೋಕ್ತವಾಗಿವೆ. ಈ ವಿದ್ಯೆ ಎಲ್ಲಿ ಸಾಧಿಸಿದೆ? ಹೇಗೆ ಸಾಧಿಸಿದೆ? ನನಗೆ ಸಾಧಿಸಿದ್ದರೆ ನಾನು ಮಾತ್ರ ಶ್ರೇಷ್ಠ ಕಥೆಗಾರ! ಅಬ್ಬಾ! ಕಥೆಗಾರನೇಕೆ? ಪ್ರಥಮ ದರ್ಜೆಯ ಕಾದಂಬರಿಕಾರ! ಇಷ್ಟೇ ಅಲ್ಲ, ಆನಂದಕಂದ, ಅಂಬಿಕಾತನಯ ದತ್ತರನ್ನು ಹಿಂದೆ ಹಾಕುವಂಥ (ಕವಿತೆ) ಕವನಗಳನ್ನು ಬರೆದು ನಿನ್ನಂಥ ತರುಣಿಯರ ಹೃದಯ ಕಮ ಲದಲ್ಲಿ ವಿರಾಜಿಸುವ 'ಕವಿಶಾಂ' ನಾಗುತ್ತಿದೆ. ಆದರೆ ದೇವರು ನನಗೆ ಆ ಶಕ್ತಿ ಕೊಡಲಿಲ್ಲ ನೋಡ.

"ಅಲ್ಲಾ ನೀವು ಈಗ ಕುಳಿತದ್ದು ಆ ಅಭಾಗಿನಿಯ ಕಥೆ ಕೇಳ ಲಿಕ್ಕೋ? ನನ್ನನ್ನು ಹೊಗಳಿ ಹಾಸ್ಯ ಮಾಡಿ ಅಳಿಸಲಿಕ್ಕೋ? ನೀವೇ ಹೇಳಿ"

"ಯಾಕೆ ಆಳುವಿಯೇಕೆ? ಹುಚ್ಚಳೋ? ದಡ್ಡಳೋ? ಅಶಿಕ್ಷಿತಳೋ ನೀನು?

"ಆಹುದು ಎಲ್ಲವೂ ನಾನು"

“ ಅಂದರೆ ? ” ಎನ್ನುತ್ತ ಬಿನಾಳನ್ನು ಶಾಮರಾಯರು ತಮ್ಮ ಬಾಹು ಗಳಲ್ಲಿ ಬಿಗಿದು ಮುದ್ದನ್ನಿತ್ತರು.

“ ಹುಂ ಸರಿರೀ ನೀವು ಇನ್ನೂ ಚಿಕ್ಕವರಾಗಿದ್ದೀರಲ್ಲಾ ?

“ ಅಹುದು ನಾನಿನ್ನು ಚಿಕ್ಕವ. ಮೂವತ್ತಕ್ಕೆ ಮೂರು ವರುಷ ಕಡಿಮೆಯ ಮುದುಕ. ನೀನು ಮಾತ್ರ ಇಪ್ಪತ್ತಕ್ಕೆ ಎರಡು ವರುಷ ಕಡಿಮೆಯ ಅಜ್ಜಿ. ”

“ ಹೋಗರೀ, ಯಾವಾಗಲೂ ಚೇಷ್ಟೆ ” ಎಂದು ತನ್ನ ಕೋಮಲ ವಾದ ಕೈಗಳಿಂದ ಶಾಮರಾಯರ ತಲೆಗೆ ಪೆಟ್ಟನ್ನಿಟ್ಟಳು. “ ನೋಡ್ರಿ, ನೀವು ಬಹಳೇ ಚೆಲುವರು. ”

“ ನೀನು ? ನೀನು ತ್ರಿಪುರ ಸುಂದರಿ. ನಿಡಿದಾದ ಮೂಗು ಅಲ್ಲ, ಮುನ್ನೊಳ್ಳಿಯ ಪಾವಿನಂಥ ಮೂಗು, ಕರೆಯ ಹುಬ್ಬು, “ ಸಾಕು, ಸಾಕು ಅಳುವೆ ನೋಡ್ರಿ ” ಎಂದಳು ಆಗ ಶಾಮರಾಯರು ಬಿನಾಳನ್ನು ಬಾಹು ಗಳಿಂದ ಬಿಗಿಯುತ್ತ “ ಅಳುವು ಇದು ಹೆಣ್ಣು ಮಕ್ಕಳ ಪಾಶುಪತಾಸ್ತ್ರ. ಇದನ್ನು ಉಪಯೋಗಿಸಿ ಗಂಡಂದಿರನ್ನು ಮರಳು ಮಾಡಿ ಮರುಳು ಗಾಡಿಯ ವಾಹನದಂತೆ ಉಪಯೋಗಿಸಬೇಡಿರಿ. ಜಗತ್ತಿನಲ್ಲಿ ಬಾಳಲು ಸ್ವಲ್ಪ ಸ್ಥಳ ಕೊಡಿರಿ. ಮೇಲೆ ಸ್ವಾತಂತ್ರ್ಯವಿಲ್ಲವೆಂದು ತಲೆಯಲ್ಲಾ ಹರಟು-ತ್ತೀರಿ. ವಿಚಾರ ಮಾಡಿರಿ. ”

“ ನಾವು ಹರಟುವವರೋ ? ನೀವು ಹರಟುವವರೋ ? ”

“ ನೀವು ”

“ ಅಲ್ಲ ”

“ ನೀವು ”

“ ಅದು ಹೇಗೆ ? ಸ್ತ್ರೀ ಸ್ವಾತಂತ್ರ್ಯವೆಂಬ ವಿಷಯ ಎತ್ತಿ ಹೆಂಗಸರನ್ನು ಹುರುದುಂಬಿಸಿ ಅವರಿಂದ ಹೊಗಳಿಸಿಕೊಳ್ಳುವದು ಅವಳಲ್ಲಿ ಓರ್ವಳನ್ನು ಪ್ರೀತಿಸುವದು. ”

“ ಓರ್ವಳನ್ನೇ ? ”

“ ಓರ್ವಳನ್ನೇ ಏಕೆ ? ಬಲೆಗೆ ಬಿದ್ದವರನ್ನೆಲ್ಲ ಬಲೆಯಲ್ಲಿ ಹಾಕಿಕೊಂಡು ಮತ್ತೆ ಆ ಹುಡಿಗೆ ಹಾಗೆ ಈ ಹುಡಿಗೆ ಹೀಗೆ ಎಂದು ತಲೆ ಹರಟುತ್ತ, ತುಂಟ ನಗೆ ತೋರುತ್ತ ಮೈ ಮೇಲೆ ಬಂದರೆ ತಲೆ ಮರೆಯಿಸಿಕೊಂಡು ಓಡಿ ಹೋಗುವದು. ಆ ಮೇಲೆ ಅವು ಪಾಪ ತಾವು ಮಾಡಿದ ಪಾಪಕ್ಕೆ ನಂಬಿ ಕೆಟ್ಟೆನೆಂದು ಶಪಿಸುತ್ತ ಕೆರೆ, ಭಾವಿ ಪಾಲಾಗಿ ಜಗದಲ್ಲಿ ಈ ಸ್ವತಂತ್ರ ಸ್ತ್ರೀಯರ ಹಾದಿಯಿದೇ ಎಂದು ಹಳಿಯುವ ಕಾಮು ಸಾಧುಗಳು ಕಾಮು ಸಂತೈಸಿಕೊಳ್ಳಲು ಪುರುಷರು ಹಾಕುವ ಸ್ತ್ರೀ ಸ್ವಾತಂತ್ರ್ಯದ ಕಪನಿ ಇದರಲ್ಲಿ ಪುಣ್ಯ ಪುರುಷರೂ ಇದ್ದಾರೆ. ಆದರೆ ಇದರಲ್ಲಿ ವೇಷಧಾರಿಗಳೇ ಬಹಳ ”

“ ಹೌದು ”

“ ಮತ್ತೇನು, ಹೌದು, ಹೌದು ನೂರ ಷಲ ಹೌದು. ಯಾಕಂದರೆ ದಿನಾ ಬೆಳಗಾದರೆ ಪತ್ರಿಕೆಯಲ್ಲಿ ಕೆರೆಯಲ್ಲಿ ಓರ್ವ ತರುಣಿ, ಭಾವಿಯಲ್ಲಿ ಓರ್ವ ತರುಣಿ ಅಂತಾ ಓದುತ್ತೇವೆ. ಅದರಲ್ಲಿ ಧೈರ್ಯವಿದ್ದವಳು ಹಡೆದ ಕೂಸನ್ನು ಒಗೆಯುತ್ತಾಳೆ. ಮತ್ತು ಕೆಲವರು ಪಂಢರಪೂರದಂಥ ಅನಾಥ ಬಾಲಿಕಾಶ್ರಮದಲ್ಲಿ ಹೆತ್ತು ಹೊತ್ತ, ಹೆತ್ತ ಕರುಳನ್ನು ಮರೆತು ಮರಗುತ್ತ ಬರುತ್ತಾರೆ ಇದೆಲ್ಲ ಪಾಪವು ಆ ಪುಣ್ಯ ಪುರುಷರವೇ ” “ ಹೌದು. ಇವೆಲ್ಲ ಆ ಪುಣ್ಯ ಸ್ತ್ರೀಯರ ಒಪ್ಪಿಗೆ ಇಲ್ಲದೆ ನಡೆಯುವದಿಲ್ಲವಲ್ಲಾ ? ”

“ ಒಪ್ಪಿಗೆ ? ಯಾತರ ಒಪ್ಪಿಗೆ ? ಮರುಳು ಮಾಡಿ ಮಳಲಲ್ಲಿ ನೂಕುತ್ತಾರೆ. ” “ ಅಂದ ಮೇಲೆ ಗಂಡಸರದಷ್ಟೇ ತಪ್ಪಲ್ಲವೇ ? ಎಂದು ಉತ್ತರದ ಹಾದಿಯನ್ನು ಕಾಯುವವನಂತೆ ಶಾಮರಾಯರು ಬಿನಾಳ ಮುಖವನ್ನು ಅವಲೋಕಿಸಿದರು “ ಹೌದು, ಹೌದು. ಯಾಕಂದರೆ ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ ಅಂತಾ ಶಾಸ್ತ್ರ ಹೇಳುವದು. ಅಂದ ಮೇಲೆ ಅಬಲೆಯನ್ನೇಕೆ ಅಡ್ಡ ಮಾರ್ಗಕ್ಕೆಳೆಯಬೇಕು ? ಗಂಡಸರು ಮೀಸೆ ಹೊತ್ತ ಗಂಡಸರು. ಅವರು ತಪ್ಪು ಮಾಡಿದರೆ ಅವರ ಮರ್ಯಾದೆ ಹೋಗದು. ಯಾಕಂದರೆ ಅವರು ಗಂಡಸರು ಅದೇ ಹೆಂಗಸರು ಮಾಡಿದರೆ ಮರ್ಯಾದೆ ಹೋಗುವದು. ಗಂಡಸರದಷ್ಟೇ ಜಗತ್ತಿನಲ್ಲಿ ಅಧಿಕಾರ. ಅವರು ಏನು

ಮಾಡಿದರೂ ತಪ್ಪಿಲ್ಲ. ಏನೇ ಇರಲಿ ಸರಕಾರವು ಬಹಳೇ ಒಳಿತು ಮಾಡಿತು. ಒಬ್ಬ ಗಂಡಸು ಒಬ್ಬಳನ್ನೇ ಲಗ್ನವಾಗಬೇಕೆಂಬ ಆಜ್ಞೆ ಮಾಡಿದೆ. ಇಲ್ಲದಿದ್ದರೆ ನಿಮ್ಮಂಥ ದುಡ್ಡುಳ್ಳವರು ಗುಂಗೀ ಹುಳ. ಪುಷ್ಪಗಳಿಂದ ಪುಷ್ಪಕ್ಕೆ ಹಾರಾಡುವಂತೆ ಕನಿಷ್ಠ ೩-೪ ಲಗ್ನಗಳನ್ನಾದರೂ ಆಗುತ್ತಿದ್ದೀರಿ''

" ಆಯಿತಿಲ್ಲೋ ನಿನ್ನ ಪುರಾಣ "

" ನನ್ನ ಪುರಾಣ ? "

" ಹೌದು ನಿನ್ನ ಪುರಾಣ "

" ನನ್ನ ಪುರಾಣವಲ್ಲ. ಇದು ಜಗದ ಜೀವನದ ಬಾಳಿನ ತೊಡಕು. "

" ಬಿನಾ ನೀನು ಇಷ್ಟು ಮಾತಾಡುವದನ್ನು ಇಂದೇ ಕಂಡೆ ''

" ಹೌದು ಇಂದೇ ಕಂಡಿರಲ್ಲವೇ ? ''

" ಹೌದು ಯಾಕೆ ? "

" ಯಾಕಿಲ್ಲ ಆದರೂ ಅಂದಿನ ನನ್ನ ಭಾಷಣಕ್ಕೆ ಮೆಚ್ಚಿ ಲಗ್ನವಾದೆ ಅಂತಾ ದಿನಾಲು ದುಂಬಾಲು ಬೀಳುತ್ತೀರಿ ಆದರೆ ಇಂದೇ ಕಂಡೆ ಅಂತಾ ಈಗ ಹೇಳುತ್ತೀರಿ ಅದಕ್ಕೇ ಹಾಗೆ ಕೇಳಿದೆ. "

"ಹೀಗೋ ! ಮತ್ತೇನಿಲ್ಲವಲ್ಲ ?'' ಎಂದು ಸರಸದಲ್ಲಿ ತಲ್ಲಣರಾದಾಗ ಗಡಿಯಾರವು ಎಂಟು ಬಾರಿಸಿತು. ಬಿನಾ ಗಾಬರಿಯಾಗಿ ಎದ್ದು ಅಡಿಗೆಯ ವೇಳೆಯಾಯಿತಲ್ಲಾ ಎಂದು ಗಡಿಬಿಡಿಯಿಂದ ಬಿನಾ ಏಳುವಳು. ಶಾಮು ರಾಯರು ಅವಳ ಸೆರಗು ಹಿಡಿದು " ಕುಳಿತುಕೋ ಬಿನಾ, ಯಾಕೆ ? ಊಟ ಮಾಡುವವರು ನಮ್ಮಿಬ್ಬರನ್ನು ಬಿಟ್ಟು ಬೇರೆ ಹೊರಗಿನವರು ಯಾರೂ ಇಲ್ಲ ವಲ್ಲಾ ? ನೀನು ಈ ದಿವಸ ತಲೆಯಲ್ಲಾ ಹರಟಿದ್ದಿ ಅಲ್ಲ ಮನವಾರೆ ಮಾತಾಡಿದ್ದಿ.

"ಹೌದು ತಲೆಯಲ್ಲಾ ಹರಟಿದ್ದೇನೆ. ನಿಮ್ಮ ಗಂಡಸು ಸಮಾಜ ವನ್ನೇ ಹಳಿದಿದ್ದೇನೆ. ಆದರೆ ಲತೆಗೆ ಆಶ್ರಯ ಮಾಮರವೆಂಬುದನ್ನು ಮರೆತಿದ್ದೆ."

"ಹೀಗೋ ! ಈಗಲಾದರೂ ನೆನಪಾಯಿತಲ್ಲವೆ ?"

"ನೆನಪಾಗದೇನು. ಆಶ್ರಯದಾತರನ್ನು ಮರೆಯುವದುಂಟೇ ?"

"ಅಂತೂ ಬಿನಾ ಅನ್ನ ಹಾಕಿದವರನ್ನು ಮೂಕ ಪ್ರಾಣಿಗಳು ಹಿಂಬಾ ಲಿಸುತ್ತವೆ. ಆದರೆ ಮಾನವರು ?............ಆದರೂ ಬಿನಾ ನಿನ್ನ ಭಾವನೆ ಯಲ್ಲಿ ಮಾನವರೂ ಇಷ್ಟು ಪ್ರಾಮಾಣಿಕರಾದ ಮೇಲೆ ಇನ್ನೇನು ? ಎಲ್ಲವೂ ಒಳಿತು."

"ಆಗಲಿ ಒಳಿತಾಗಲಿ, ಕೇಡಾಗಲಿ ಒಲೆಯ ಮುಂದೆ ಮಾತ್ರ ಹೋಗಲೇಬೇಕಲ್ಲಾ ?"

"ಯಾಕೆ ಬೆಳಗಿನ ಅಡಿಗೆ ಏನೂ ಉಳಿದಿಲ್ಲವೆ ?"

"ಉಳಿದಿದೆ ಸ್ವಲ್ಪ"

"ಹಾಗಾದರೆ ಸಾಕು ಉಪ್ಪಿಟ್ಟು ಮಾಡಿ ಬಿಡು"

"ಅದನ್ನಾದರೂ ಮಾಡಲೇಬೇಕಲ್ಲವೆ ?"

"ನೀನು ಹೆಂಗುಸಾಗಿ ಹುಟ್ಟಿದ್ದು ತಪ್ಪು. ಗಂಡು ಮಗುವಾಗಿ ಹುಟ್ಟಬೇಕಾಗಿತ್ತು."

"ಹೌದು ಅದು ಬ್ರಹ್ಮನ ತಪ್ಪು"

"ಅಲ್ಲ, ನಿನ್ನ ತಾಯಿಯ ತಪ್ಪು, ಅದು ಅಲ್ಲ ನಿನ್ನ ತಂದೆಯ ತಪ್ಪು."

"ಅಂದ ಮೇಲೆ ನಾಳೆ ನಿಮಗೆ ಹೆಣ್ಣು ಹುಟ್ಟದರೆ ಅದು ನಿಮ್ಮ ತಪ್ಪು"

"ಅಲ್ಲ, ನಿನ್ನ ತಪ್ಪು"

"ಯಾರದೇ ತಪ್ಪಿರಲ್ಲಿ ಮೊದಲು ಸೃಷ್ಟಿ ಹುಟ್ಟಿಸಿದ್ದು ಆ ಬ್ರಹ್ಮನ ತಪ್ಪು. ಆ ಮೇಲೆ ಎಲ್ಲರ ತಪ್ಪು."

ಏನಾದರೂ ಮಾಡುತ್ತೇನೆ. ರಾತ್ರಿ ಬಹಳವಾಯಿತು" ಎನ್ನುತ್ತ

ಬಿನಾ ಅಲ್ಲಿಂದ ಏಳಹತ್ತಿದಳು. ಶಾಮರಾಯರು ಬಿನಾಳನ್ನು ಎಳೆದು "ಒಲೆ ಹೊತ್ತಿಸಬೇಡ, ಸ್ಟೋವ್ಹ ಹೊತ್ತಿಸು" ಎಂದರು.

"ಎಷ್ಟು ಪ್ರೇಮ ಅಂತಾ."

"ಪ್ರೇಮ! ಅಂತಾ."

"ಪ್ರೇಮವಿದ್ದಿಲ್ಲಯೋ ಇಲ್ಲಿ ಬಂದಿರುವಿ ಬಿನಾ."

"ಹೀಗೋ!........ನನಗೇನು ಗೊತ್ತು?"

"ನಿನಗೆ ಹೇಗೆ ಗೊತ್ತಾದೀತು? ಗುಪ್ತಾಗಿ ಮಾಡಿಕೊಳ್ಳಿರಿ, ನಿಮ್ಮ ಹೊರ್ತು ಬೇರೊಬ್ಬರನ್ನು ಲಗ್ನವಾಗುವದು ಸಾಧ್ಯವೇ ಇಲ್ಲ ಅಂತಾ ಕದ್ದು ಕರೆದು ಹೇಳಿದ್ದು ಮರೆಯಿತಲ್ಲವೇ?"

"ಸಾಕು ಹಳೆಯ ಪುರಾಣ, ಸದ್ಯಕ್ಕೆ ಉಪ್ಪಿಟ್ಟು ತಯಾರಿಸುವೆ" ಎಂದಳು.

"ಆಯಿತು. ನಿನಗೆ ತಿಳಿದದ್ದು ಮಾಡು. ಆದರೆ ಅವಳ ಕಥೆ ಉಳಿದೇ ಹೋಯಿತಲ್ಲಾ?"

"ಆ ಕಥೆ ಈಗ ಬೇಡ, ಅವಳ ಬಾಯಿಂದಲೇ ಕೇಳುವಿರಂತೆ" ಎಂದು ಹೇಳಿ ಬಿನಾಳು ಅಡಿಗೆಯ ಮನೆ ಸೇರಿದಳು.

ಅಂದು ರವಿವಾರ ಶಾಮರಾಯರು ಆಫೀಸ ಸೂಟಿಯುದ್ದರಿಂದ ಮನದ ಆಲಸ್ಯವನ್ನು ಕಳೆಯುವದಕ್ಕಾಗಿ ಊಟ ಮಾಡಿ ಪಡಸಾಲೆಯ ಲ್ಲಿಯ ಕೋಣೆಯಲ್ಲಿ ಮಲಗಿದ್ದಾರೆ. ಪಡಸಾಲೆಯಲ್ಲಿ ಬಿನಾ ತನ್ನ ಚಾಕರಳಾದ ವಿಜಯಳ ಕೂಡ ಹರಟೆ ಹೊಡೆಯುತ್ತಾ ಆನಂದಕಂದರ ಪುಸ್ತಕವಾದ ಮಗಳ ಮದುವೆಯನ್ನು ಓದಿ ಹೇಳಹತ್ತಿದ್ದಾಳೆ. ಬಿನಾಳಿಗೆ ವಿಜಯಳು ಓದು-ಬರಹ ಬಲ್ಲವಳೆಂದು ತಿಳಿದಿರಲಿಲ್ಲ. ಅದಕ್ಕಾಗಿ ಅದನ್ನು ಅತಿಯಾಗಿ ವರ್ಣಿಸುತ್ತಿದ್ದಳು. ತನ್ನ ಗಂಡ ಸಾಹಿತಿ, ತನ್ನ ಅಣ್ಣ ಸಾಹಿತಿ, ತಮ್ಮ ಮನೆಯಲ್ಲಿ ಎಲ್ಲರೂ ಲೇಖಕರೇ ಇದ್ದೇವೆ, ತಾನೂ ಸಹ ಎಷ್ಟೋ ಸಣ್ಣ ಕಥೆಗಳನ್ನು ಬರೆದಿದ್ದೇನೆ ಎಂದು ಆತ್ಮ ಪೌರುಷವನ್ನು ಕೊಚ್ಚು ತ್ತಿರುವಾಗಲೇ ಬಿನಾಳ ಗೆಳತಿಯಾದ ಲಲಿತೆಯು ಬರುವಳು.

"ಸಾಗಲಿ, ಬಿನಾ."

“ ಬಂದೆಯಾ, ಬಾ ಒಳಿತಾಯಿತು. ನೀನು ಹೋದ ರವಿವಾರ ಏಕೆ ಬರಲಿಲ್ಲ ? ಅಂತಾ ಅನ್ನಿಸಿತ್ತು. ”

“ ಅನ್ನಿಸಿರಬಹುದು. ಆದ್ದರಿಂದಲೇ ಈ ರವಿವಾರ ಬಂದೆ. ಹಾಗೆ ಬಾರದೆ ಬಿಟ್ಟರೆ ನೀನು ನಿನ್ನ ಡೌಲು ಹೇಳುತ್ತಾ ಶಿಖರವನ್ನೇ ಮುಟ್ಟಿದರೆ ನಾವು ಕೆಳಗುಳಿಯಬಹುದೆಂಬ ಅಂಜಿಕೆ. ”

“ ನಿನ್ನದು ಬಹಳ ಚೇಷ್ಟೆ ನೋಡು. ಯಾವಾಗಲೂ ಹಾಸ್ಯವೇ ? ”

“ ನನ್ನದು ಹಾಸ್ಯ, ನಿನ್ನದು ಉತ್ತರನ ಪೌರುಷ. ”

“ ಅಲ್ಲೇ, ನನ್ನದೇನಿದರಲ್ಲಿ ಉತ್ತರನ ಪೌರುಷ ? ”

“ ಕಥೆಗಾರ್ತಿ ಲೇಖಕಿ ಅಂತಾ ಬಣ್ಣಾ ಹೇಳಿಕೊಳ್ಳುವದು.

“ ನಾನು ಬಣ್ಣ ಹೇಳಿಕೊಳ್ಳುವವಳಲ್ಲೇ ? ಪಾಪ ವಿಜಯಳು ಕೇಳಿದ್ಲು ಅಂತಾ ಹೇಳಿದೆ. ”

“ ಇವರು ಯಾರು ? ನಿಮ್ಮವರೋ ? ”

“ ಹೌದು ನಮ್ಮವಳು. ”

ಅಷ್ಟರಲ್ಲಿ ವಿಜಯಳ ಕಣ್ಣಲ್ಲಿ ನೀರು ಬಂದವು.

“ ಅಲ್ಲ, ನಾನಾವರವಳಲ್ಲ. ನಾನೋರ್ವ ಬೀದಿಯ ಭಿಕಾರಿ. ಪತಿಯನ್ನಗಲಿದ ಪತಿತಳು. ಹೊಟ್ಟೆಗೆ ಅನ್ನವಿಲ್ಲದ ಅಭಾಗಿನಿ. ಎಷ್ಟು ಪರಿಯಿಂದ ಹೇಳಿದರೂ ಕಡಿಮೆಯೇ ತಾಯಿ. ನನ್ನ ಪರಿತಾಪಕ್ಕೆ ನನ್ನನ್ನು ತಮ್ಮವಳೆಂದು ತಿಳಿದು ಆಶ್ರಯ ಕೊಟ್ಟ ನನ್ನ ತಾಯಿ ಇವಳು ” ಎಂದು ಬಿಕ್ಕುತ್ತ ಕಣ್ಣೀರು ಒರೆಸಿಕೊಳ್ಳುತ್ತ ತನ್ನ ಪರಿಸ್ಥಿತಿಯನ್ನು ವರ್ಣಿಸಿದಳು. ಬಿನಾಳು ಕರುಣ ದೃಷ್ಟಿಯಿಂದ ಲಲಿತೆಯ ಕಡೆಗೆ ನೋಡುತ್ತಿದ್ದಳು. ಎಷ್ಟಾದರೂ ಹೆಣ್ಣುಗರುಳು ಲಲಿತೆಗೆ ದುಃಖವೆನಿಸಿತು.

“ ನೀನು ಹೀಗಾಗಲು ಕಾರಣವೇನಮ್ಮಾ ? ” ಎಂದು ಲಲಿತೆ ಜೀವ ತಡೆಯಲಾರದೆ ಪ್ರಶ್ನಿಸಿದಳು.

“ ಅದು ದೊಡ್ಡ ಕಥೆಯಿದೆ ಏನು ಹೇಳಲಮ್ಮಾ ” ಎಂದು ಅನ್ನಲು ಬಿನಾಳು “ ಲಲಿತೆ ಅವಳ ಕಥೆಯನ್ನು ಕೇಳಲಿಕ್ಕೆ ಆಗದು. ಅಷ್ಟು

ದುರಂತವಿದೆ. ನನ್ನವರು ಎಷ್ಟು ಪೀಡಿಸಿದರೂ ನನಗೆ ಅವಳ ಕಥೆಯನ್ನು ಹೇಳುವ ದಾಗಲಿಲ್ಲ. ಸವಡಿದ್ದಾಗ ಅವಳ ಬಾಯಿಂದ ನೀವೇ ಕೇಳಿಕೊಳ್ಳಿ ರೆಂದು ಹೇಳಿದೆ. ಕಥೆಯನ್ನು ಕೇಳಿ ಯಾರಿಗೂ ಈ ಪರಿಸ್ಥಿತಿ ಬರ ಬಾರದು ಎನಿಸಿತು.''

"ಹಾಗಾದರೆ ನನಗೂ ಸ್ವಲ್ಪ ಹೇಳಲ್ಲಾ ತಾಯೀ. ಯಾಕೋ ಕೇಳುವ ಇಚ್ಛೆಯಾಗಿದೆ" ಎಂದಳು ಲಲಿತೆ.

"ಅಮ್ಮಾ ನಾನು ಅದೇ ಆಗ ಇಂಗ್ಲೀಷ ೬ನೇ ಇಯತ್ತೆಯನ್ನು ಪಾಸಾಗಿದ್ದೆ. ಆಗ ನನಗೆ ೧೬-೧೭ ವರುಷಗಳಿರಬಹುದು. ಹಾಳು-ಮನೆಯ ಮುದಕೆಯರು ನನ್ನ ತಂದೆಯನ್ನು ಪೀಡಿಸಹತ್ತಿದರು. "ವಿಜಯ ಳಿಗೆ ಲಗ್ನದ ವಯಸ್ಸು ಆಗುತ್ತಾ ಬಂತು. ಈಕೆಯ ಓರಿಗೆಯುವರು ಆಗಲೇ ಎರಡು ಮಕ್ಕಳ ತಾಯಿಯಾಗಿರುತ್ತಾರಪ್ಪಾ. ಹೀಗೆ ಸುಮ್ಮನೆ ಕುಳಿತು ಕೊಳ್ಳುವದು ಒಳ್ಳೆಯುದಲ್ಲ. ನಿನಗೆ ನಾಲ್ಕಾರು ಹೆಣ್ಣು ಇವೆ. ಅವೆಲ್ಲವನ್ನು ಒಂದೊಂದರಂತೆ ದಂಡೆಕಟ್ಟಲೇಬೇಕು. ಬೇಗ ಈ ವರ್ಷ ಬೇಸಿಗೆಯ ರಜೆಯಲ್ಲಿ ಲಗ್ನ ಮುಗಿಸು'' ಎಂದು ಆಗಾಗ ಒತ್ತಿ ಹೇಳುತ್ತಲೇ ಇದ್ದರು. "ಹು, ಅಮ್ಮಾ ನಾನೇನು ಸುಮ್ಮನೆ ಕುಳಿತಿಲ್ಲ'' ಎಂದು ಅತ್ತ ಇತ್ತ ಹುಡುಕಿದರು. ನಾವೇನೂ ಅಷ್ಟು ಶ್ರೀಮಂತರಲ್ಲ. ಉಂಡುಟ್ಟು ಇದ್ದವರು. ನಮ್ಮ ತಂದೆಯ ಗೆಳೆಯರಾದ ರಾಮರಾಯರು ಓರ್ವ ವರನನ್ನು ಹುಡುಕಿ ತಂದರು. ಆಗಲೇ ನನ್ನ ತಂದೆಯವರು ವರನನ್ನು ಕರೆಯಿಸಿದರು. ಅಂದಿನ ವರನು-ಅಂಪರೆ ಇಂದು ನನ್ನನ್ನಗಲಿದ ನನ್ನ ಪತಿ ದೇವರು.

ಅವರು ಒಂದು ಹಳ್ಳಿಯ ಶಾನಭೋಗರು. ನೋಡಲು ಚೆಲುವರೂ, ವಿದ್ಯೆಯಲ್ಲಿಯೂ ತಕ್ಕಮಟ್ಟಿಗೆ ಪ್ರತಿಭೆಯಿತ್ತು. ಅವರಲ್ಲಿ ಒಂದು ಬಗೆಯ ತೇಜಸ್ಸು ಓಜಸ್ಸು ಇತ್ತು. ನನಗೂ ಅವರಿಗೂ ಕೂಡಿ ಬಂತು. ಮನದ ಲ್ಲಿಯೂ ಕೂಡಿ ಬಂತು. ಅದೇ ದಿವಸ ಸಾಯಂಕಾಲ ನನ್ನ ಅಣ್ಣ ಕಿಟ್ಟ ಬಹಳ ಉಪಟಳದವನು. ಅದೇ ದಿವಸ ಅವರನ್ನು ಭಾವನೆಂದು ಕೂಗಿಯೇ ಬಿಟ್ಟ. ಅದೇ ದಿವಸ ನಾವೆಲ್ಲರೂ ಸಿನಿಮಾಕ್ಕೂ ವಿಹಾರಕ್ಕೂ ಹೋದೆವು. ಅವರು ಹಳ್ಳಿಯವರಾದರೂ ಶಹರದ ಜನರನ್ನು ಹೆಚ್ಚಿಸುವಷ್ಟು ಅವರಲ್ಲಿ ಸಂಸ್ಕೃತಿ ಇತ್ತು. ಆದರೆ ಅದು ಡಾಂಭಿಕ ಚೈನಿಯಾಗಿರಲಿಲ್ಲ. ಮೃದುವಾದ

ಮಾತು, ಮುಗ್ಧ ಸ್ವಭಾವ. ಅಂತೂ ನನ್ನ ಸ್ವಭಾವಕ್ಕೆ ತಕ್ಕವರೇ ಸಿಕ್ಕ ರೆಂದು ಆನಂದದ ಅರಮನೆಯಲ್ಲಿ ಮನೋರಾಜ್ಯ ಕಟ್ಟುತ್ತಿದ್ದೆ. ಆದರೆ ವಿಧಿಯು ಅಡ್ಡ ಬಂದಿತು. ಅವರಿಗೆ ಉತ್ಪನ್ನವಿಲ್ಲವೆಂದು ಮನೆತನ ಬಡ ವರದ್ದೆಂದು ಅವರಿಗೆ ಆಗವ ಜನ ಸುದ್ದಿ ಹೇಳಿದರು. ಅದರಿಂದ ಮನೆಯುವ ರೆಲ್ಲರೂ ಬೆದರಿದರು. ಮನೆಯ ಜನರು ಓಬೀರಾಯನ ಕಾಲದವರು. ಅವರಿಗೆ ಉತ್ಪನ್ನವಿಲ್ಲದಿದ್ದರೆ ಬೇಡವೆಂದು ನನ್ನ ತಾಯಿಯ ಹಟ ಆದರೆ ವಚನ ಕೊಟ್ಟ ನನ್ನ ತಂದೆ ಹಿಂದೆ ಮುಂದೆ ನೋಡಹತ್ತಿದರು. ದಿನಾಲು ಮುಂದೇನು ? ಎಂಬ ಚರ್ಚೆ ಸುರುವಾಯಿತು. ಮನದಲ್ಲಿ ಮಂಡಿಗೆ ಮಾಡಿದ ಪತಿಯು ಕೈಬಿಟ್ಟನೆಂದು ದಿನಾಲು ನನಗೆ ಕಣ್ಣೀರು ಹಾಕುವದು ತಪ್ಪಲಿಲ್ಲ. ಕಡೆಗೆ ನನ್ನ ದೈವ ಇದ್ದ ಹಾಗೆ ಆಗಲೆಂದು ಮನಸ್ಸು ಎಷ್ಟು ಗಟ್ಟಿ ಮಾಡಿದರೂ ಧೈರ್ಯವಾಗಲೊಲ್ಲದು. ಯಾರಿಗೆ ಏಕಾದಶಿಯ ಮನೆಯಿಂದ ಶಿವರಾತ್ರಿಯ ಮನೆಗೆ ಹೋಗಬೇಕೆನ್ನುಸುವದು ? ಆದರೆ ಠೀವಿಯಿಂದ ಬಂದು ಹೋದ ರಾಯರು ಬರೇದು ಇರಲು ಶಕ್ಯವಿಲ್ಲವೆಂದು ನನ್ನ ಮನಕ್ಕೆ ಹಾಗೂ ನನ್ನ ಅಕ್ಕ ತಂಗಿಯರ ಮನಕ್ಕೆ ಅನ್ನಿಸುತ್ತಿತ್ತು. ಆದರೆ ಧೈರ್ಯ ಮಾಡಿ ಮುಂದೆ ಬಂದು ಹೇಳುವವರು ಯಾರೂ ಇಲ್ಲ. ಕಡೆಗೆ ನಾನೇ ಧೈರ್ಯದಿಂದ ನಾನು ಅವರನ್ನೇ ವರಿಸುವೆ. ಆದದ್ದಾಗಲಿ ನನ್ನ ಹಣೆಯ ಬರಹವೆಂದು ಕಡೆಗೆ ಸಮ್ಮತಿಯನ್ನಿತ್ತೆ. "

"ಮುಂದೇನಾಯಿತು ? " ಎಂದು ಲಲಿತೆಯು ಬಹಳ ಉತ್ಸುಕತನ ದಿಂದ ಪ್ರಶ್ನಿಸಿದಳು, ಇತ್ತ ಕೋಣೆಯಲ್ಲಿ ಶಾಮರಾಯರಿಗೆ ಎಚ್ಚರವಾ ಗಿತ್ತು. ಹಾಸಿಗೆಯಲ್ಲಿಯೇ ಹೊರಳುತ್ತ ತಾವು ಇಚ್ಛಿಸಿದ ಕಥೆಯು ತಾನಾ ಗಿಯೇ ಸುರುವಾಗಿದೆ ಸಾಗಲೆಂದು ವಿಜಯಳ ಕಥೆಯನ್ನು ಕೇಳುತ್ತ ಮಲಗಿದರು.

"ನನ್ನ ತಂದೆಯವರು ವೈಶಾಖದಲ್ಲಿ ಒಂದು ಮುಹೂರ್ತ ಠರಾಯಿ ಸಿದರು. ಇದ್ದ ಬಿದ್ದ ಜೋಳ, ಕಡಲೆ, ಮಾರಿ ಮಗಳ ಮದುವೆಗೆ ಹಣವನ್ನು ಅಣೆ ಮಾಡಿದರು. ಆದರೆ ಮನದಲ್ಲಿ ಮಾತ್ರ ಸಮಾಧಾನವಿರ ಲಿಲ್ಲ. ಮನೆತನ ಬಡತನದ್ದಾಗಿ ಮಗಳ ಸುಖಕ್ಕೆ ಎರವಾಗುವದೋ ? ಎಂಬ ಭಯವು ಅವರನ್ನು ಆವರಿಸಿತ್ತು. ಕಡೆಗೆ ಅದರಂತೆಯೇ ಆಯಿತು "

“ ಅಂದರೆ ? ” ಎಂದು ಲಲಿತೆಯು ಪ್ರಶ್ನಿಸಿದಳು. ಅಷ್ಟರಲ್ಲಿ ಬಿಸಾಳು ಬೇಗ ಬೇಗ ಹೇಳಮ್ಮಾ ಎಂದು ವಿಜಯಳಿಗೆ ಕೇಳಿಕೊಂಡಳು.

“ ಲಗ್ನವೂ ಆಯಿತು. ಪತಿಯ ಮನೆಯನ್ನು ಸೇರಿದೆ. ”

“ ಅಲ್ಲಿ ಹೇಗಿತ್ತು ? ” ಎಂದು ಲಲಿತೆಯು ಅವಸರದಿಂದ ಕೇಳಿದಳು.

“ ನನ್ನವರ ಮನೆ ಆ ಊರಿನಲ್ಲಿಯೇ ದೊಡ್ಡದು. ಸಾಕಷ್ಟು ಉತ್ಪನ್ನ. ಜನತೆಯು ನಮ್ಮವರನ್ನು ಮರ್ಯಾದೆಯಿಂದ ಕಾಣುತ್ತಿದ್ದರು. ನನ್ನನ್ನಂತೂ ಶಾನಭೋಗರ ಸೊಸೆಯೆಂದು, ರೈತರು, ವಾಲಿಕಾರರು, ಇತರ ಒಕ್ಕಲು ಹೆಣ್ಣುಮಕ್ಕಳು ಅತಿಯಾಗಿ ಮರ್ಯಾದೆ ಕೊಡುತ್ತಿದ್ದರು. ಕೆಲವರು ಒಯ್ನಿಯೆಂತಲೂ, ಕೆಲವರು ಕಾಕೂ ಎಂತಲೂ ಸಂಭೋಧಿಸುತ್ತಿದ್ದರು. ನನ್ನವರಂತೂ ಜೀವದ ಪ್ರಾಣವೆಂದು ಬಗೆದು ಕೈಯಲ್ಲಿ ಹಿಡಿದು ಸಲುಹಿದರು. ನನ್ನ ಅತ್ತೆ ಮಾವ ಮಹಾತ್ಮರಾದ ಮಲ್ಲಪ್ಪನ ಮಾವನಂತೆಯೂ, ಅತ್ತೆಯವರು ತಾಯಿಯಂತೆಯೂ ನಡೆದಿದ್ದರು. ನನ್ನ ಶಾಂತ ಸ್ವಭಾವಕ್ಕೆ ಅವರೆಲ್ಲರೂ ಮೆಚ್ಚಿ ನನಗೆ ಎಷ್ಟು ಶಾಂತ ಈ ಹುಡುಗಿ ಎಂದು ವಿಜಯಳು ವಿಜಯಳಲ್ಲ. ನಮ್ಮ ಮನೆತನದ ವಿಜಯಮಾಲೆಯೆಂದು ಆನಂದಪಡುತ್ತಿದ್ದರು. ನಮ್ಮವರ ತಂಗಿ ಕಾಮಿನಿಯಂತೂ ನನ್ನನ್ನು ಬಿಟ್ಟು ಅರಗಳಿಗೆಯೂ ಇರುತ್ತಿರಲಿಲ್ಲ. ಒಯ್ನಿ, ಒಯ್ನಿಯಂತಾ ನನ್ನ ಕಾಲಲ್ಲಿ ಸುತ್ತಿದ ಬಳ್ಳಿಯಂತೆ ನನ್ನ ಸನ್ನಿಧಿಯಲ್ಲಿಯೇ ಇರುತ್ತಿದ್ದಳು. ಆಗಾಗ ನನಗೆ ಅತ್ತೆಯವರು ಹುಡುಗ ಇನ್ನೂ ಸ್ವಲ್ಪ ಚೇಷ್ಟೆಯವನಿದ್ದಾನೆ. ಏನೇ ಅಂದರೂ ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡವೆಂದು ಹೇಳುತ್ತಿದ್ದರು.

ನಮ್ಮವರಿಗಂತೂ ಹುಡಿಗೆ ಶಾಂತಳಿದ್ದಾಳೆ. ಪಾಪ ಅವಳನ್ನು ಕಾಡದಿರು. ಪಾಪ ಪರರ ಹೆಣ್ಣುಮಕ್ಕಳನ್ನು ಕಾಡಬಾರದು ಎಂದು ಅಡಿಗಡಿಗೊಮ್ಮೆ ಬುದ್ಧಿ ಹೇಳುತ್ತಿದ್ದರು. ಅವರಂತೂ ನನ್ನನ್ನು ಎಂದೂ ಕಾಡುತ್ತಿರಲಿಲ್ಲ. ಸದಾಕಾಲ ನಾನು ಮಾತ್ರ ಅವರ ಬಳಿಯಲ್ಲಿಯೇ ಇರಬೇಕಾಗುತ್ತಿತ್ತು. ಇದರಿಂದ ನನಗೆ ತವರೂರು ಕಾಣುವದು ಅಪರೂಪವಾಗುತ್ತಿತ್ತು. ತಂದೆ ತಾಯಿಗಳಿಂದ ಪತ್ರದ ಸುರಿಮಳೆಯಾದರೂ ತವರೂರಿಗೆ ಕಳಿಸಲು ಯಾವಾಗಲೂ ನಕಾರ. ನನಗೆ ನಿನ್ನನ್ನು ಬಿಟ್ಟು

ಒಂದು ಅರಗಳಿಗೆಯಾದರೂ ಇರಲು ಶಕ್ಯವಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತಿದ್ದರು. ಕಡೆಗೆ ನಾನು ಗರ್ಭಿಣಿಯಾದೆ. ನಮ್ಮ ಹೆರಿಗೆಯ ಕರೆ ಬಂದಿತು. ಮನಸ್ಸಿಲ್ಲದ ಮನಸ್ಸಿನಿಂದ ಹೋದೆ. ಸುಖವಾಗಿ ಹೆತ್ತೆ. ವಾರದಲ್ಲಿ ಎರಡು ಸಾರೆಯಾದರೂ ನಮ್ಮವರ ದರ್ಶನ ನನಗಾಗಿ ಕಾದಿರುತ್ತಿತ್ತು.

ಇವರ ಬರುವನ್ನು ನನ್ನ ಆಣ್ಣನು "ಇನ್ನೂ ಯಾಕ s ಬರಲಿಲ್ಲನ್ವಾ" ನಿನ್ನ ಪತಿ ದೇವರು ಎಂದು ಹಾಡಿ ಚೇಷ್ಟೆ ಮಾಡುತ್ತಿದ್ದನು. ನನ್ನ ಅಣ್ಣನಿಗೂ ನಮ್ಮ ಮನೆಯವರಿಗೂ ಬಹಳ ಪ್ರೇಮ. ನಮ್ಮ ಮನೆಯವರಿಗೂ ಬಹಳ ಪ್ರೇಮ ನಮ್ಮ ಮನೆ ಸನಾತನ ಪದ್ಧತಿಯದು. ನಮ್ಮಲ್ಲಿಯ ಜಪ, ತಪ ನಮ್ಮವರ ಮನಸ್ಸಿಗೆ ಬರುತ್ತಿರಲಿಲ್ಲ. ಅದಕ್ಕಾಗಿ ಅವರು ಬಂದಾಗ ನನಗೆ "ನಿಮ್ಮ ಅಪ್ಪನ ಕೈಯಲ್ಲಿ ಜಪಮಾಲೆ, ನಿನ್ನ ಕೈಯಲ್ಲೇನು ?" ಎಂದು ಸದಾ ಚೇಷ್ಟೆ ಮಾಡುತ್ತಿದ್ದರು. ನಮ್ಮವರಿಗೆ ಜನರ ಗೆಳೆತನ ಬಹಳ ಸದಾಸಮಯ ಗೆಳೆಯರು ಇದ್ದೇ ಇರುತ್ತಿದ್ದರು. ನಾನು ವಿನಾಕಾರಣ ಖರ್ಚ ಎಂದು ಏಕೆ ಇಷ್ಟು ಗೆಳೆಯರು ? ಯಾತಕ್ಕಾಗಿ ಬೇಕು ? ಎಂದು ಬಹಳ ವಾದಿಸುತ್ತಿದ್ದೆ. ಆದರೆ ಅವರು ಗೆಳೆಯರು ಸತ್ತಾಗ............ಇದ್ದಾಗ ಕೂಡಿಯೇ ಬೇಕಾಗುತ್ತಾರೆ ಎಂದು ಹಾಸ್ಯ ಮಾಡುತ್ತಿದ್ದರು.

ಹೆತ್ತ ಮಗುವನ್ನು ಹೊತ್ತುಕೊಂಡು ಅತ್ತೆ ಮನೆ ಸೇರಿದೆ. ನನ್ನ ಮದ್ದೈವ ನನ್ನ ಮೈಯಲ್ಲಿ ಸರಿ ಉಳಿಯಲಿಲ್ಲ. ಅತ್ತೆಯವರು ನನ್ನ ದಿನದಿನ ಕೊರಗುವಿಕೆಯನ್ನು ಕಂಡು ಎಲ್ಲಿಯಾದರೂ ತೋರಿಸಬೇಕೆಂದು ಬೆಳಗಾವಿಗೆ ಕಳಿಸಿದರು. ಅಲ್ಲಿಯೂ ಉಪಯೋಗವಾಗಲಿಲ್ಲ. ಕಡೆಗೆ ನನ್ನವರು ನಿನ್ನ ಇಚ್ಛೆ ಇದ್ದರೆ ತವರೂರಿಗೆ ಹೋಗಿ ಬಾ ಎಂದರು. ನಾನು ಕನಿಷ್ಠ ಎರಡು ತಿಂಗಳು ಕಳಿಸಿರೆಂದೆ, ಆದರೆ ಅವರು ಒಂದು ತಿಂಗಳ ಮುದ್ದತು ಕೊಟ್ಟು ಕಳಿಸಿದರು. ಆದರೆ ನನಗೆ ಬೇಗ ವಾಪಿಯಾಗಲಿಲ್ಲ. ಅದರಿಂದ ಅಲ್ಲಿಯೇ ಕೆಲವು ದಿನ ಔಷಧ ತೆಗೆದುಕೊಳ್ಳಲು ಹಚ್ಚಿದರು. ಮುಂದೆ ನಾಲ್ಕೈದು ತಿಂಗಳ ನಂತರ ಹೊರಟು ಬಾ ಅಂತಾ ಪತ್ರ ಬರೆದರು. ನಾನು ಎಷ್ಟು ಹೋಗಬೇಕೆಂದು ಮನಸ್ಸು ಮಾಡಿದರೂ ನನ್ನ ತಾಯಿಯು "ಇನ್ನೊಂದೆರಡು ತಿಂಗಳು ನಿಂತು ಔಷಧ

ತೆಗೆದುಕೋ" ಎಂದಳು. ಮಾವನವರು ಹಣ ಕಳಿಸುತ್ತಿದ್ದರು. ಜೀವನ ಸುಖವಾಗಿತ್ತು.

ನನ್ನವರಿಗೆ ನಾನಿಲ್ಲದೆ ನಡೆಯುತ್ತಿದ್ದಿಲ್ಲ. ಅವರಿಗೆ ನಾನಿಲ್ಲದಿದ್ದರೆ ಕಣ್ಣು ಕಟ್ಟುತ್ತಿದ್ದವು. ಗಂಡ-ಹೆಂಡಿರ ಪ್ರೇಮ ನನ್ನ ತಾಯಿಗೆಲ್ಲಿ ಗೊತ್ತಾಗಬೇಕು? ಅವಳು ಮಗಳೆಂಬ ಮೋಹದಲ್ಲಿ ಮುಳುಗಿದಳು. ಇತ್ತ ನನ್ನವರು "ನಾನು, ಪ್ರಕೃತಿ ಸರಿಯಾಗಿಲ್ಲ" ಅಂತಾ ತಾರು ಕೊಟ್ಟರೂ ಬರಲಿಲ್ಲ. ನನ್ನವಳು ನನ್ನವಳಾಗಿದ್ದರೆ ಬಂದೇ ಬರುತ್ತಿದ್ದಳು. ಅಂತಾ ವಿಚಿತ್ರ ಕಲ್ಪನೆ ಮಾಡಿಕೊಂಡು ಸರಿಯಾಗಿ ಔಷಧೋಪಚಾರ ಮಾಡಿಸಿಕೊಳ್ಳದೆ "ಮಣ್ಣಿನ ದೇಹ ಮಣ್ಣಿಗೆ" "ಬರುವಾಗ ತಂದಿಲ್ಲ, ಹೋಗುವಾಗ ಒಯ್ಯುವಂತಿಲ್ಲ, ಯಾರಿಗೋ ಯಾರೋ ಪುರಂದರ ವಿಠ್ಠಲ" ಎಂದು ನನ್ನ ಸ್ಮರಣೆಯಲ್ಲಿಯೇ ಪ್ರಾಣ ಬಿಟ್ಟರಂತೆ. ಎಂದು ಹೇಳಿ ಗೋಳೋ ಎಂದು ಅಳಹತ್ತಿದಳು. ಮುಂದೆ "ತವರೂರವರೇನಾದರು?" ಎಂದು ಲಲಿತೆಯು ಕಣ್ಣೀರನ್ನು ಒರೆಸಿಕೊಳ್ಳುತ್ತ ಪ್ರಶ್ನಿಸಿದಳು.

ನನಗೆ ಇದ್ದ ಒಬ್ಬ ಅಣ್ಣ. ಅವನ ಹೆಂಡತಿಯು ಬಹಳೇ ಮಾಡನಾರ್ಯಿ ಜಳು. ಸದಾ ತಾನಾಯಿತು ತನ್ನ ಗಂಡನಾಯಿತು. [illegible]ರುವಾಯಿತು. ಮನೆಯಲ್ಲಿಯ ಉಳಿದವರನ್ನೆಲ್ಲ ಅವಳು ಆಳುಗಳೆಂದೇ ತಿಳಿಯಹತ್ತಿದಳು. ಅದರಿಂದ ನನ್ನ ತಂದೆ ತಾಯಿಗಳಿಗೆ ಆಗಲಿಲ್ಲ. ಹಾಗೂ ಹೀಗೂ ನಡೆದಿತ್ತು. ಮುಪ್ಪಿನ ತಂದೆಗೆ ಮಲೇರಿಯಾವು ಅಂಟಿಕೊಂಡಿತು. ಔಷಧಕ್ಕೆ ಹಣವಿಲ್ಲೆಂದು ನನ್ನ ಅತ್ತಿಗೆ ವಾದಿಸಿದಳು. ಹಿರಿಯರದು ತೀರ ಹಟದ ಸ್ವಭಾವ. ರಾಮ, ರಾಮ, ಅನ್ನುತ್ತ ಪ್ರಾಣ ಬಿಟ್ಟರು. ತಾಯಿಯೂ ಹಟವಾದಿ ಯಾರು ಹೇಳಿದರೂ ಕೇಳದವಳು. ಒಂದು ದಿನ ಬೆಳಿಗ್ಗೆ ನನ್ನಿಂದ ನನ್ನ ಮಗಳ ಸ್ಥಿತಿ ಹೀಗಾಯಿತಲ್ಲಾ. ಅಂತಾ ತಿಳಿದು ನನಗೆ "ನನ್ನ ತಪ್ಪನ್ನು ಕ್ಷಮಿಸು" ನಿನ್ನ ಬಾಳನ್ನು ನಾನೇ ಹಾಳು ಮಾಡಿದೆ" ಎಂದಳು. ಅದಕ್ಕೆ ನನಗೂ ನಮ್ಮವರ ನೆನಪಾಗಿ ಆಗಲೇ ನಾನು ಹೋಗಿ ಆರೈಕೆ ಮಾಡಿದ್ದರೆ ಬದುಕಬಹುದಿತ್ತಲ್ಲಾ ಎಂದು ನನಗೆ ಈಗಲೂ ಅನಿಸುವದು. ಮನೆಯಲ್ಲಿ ಸೊಸೆಯ ಕಾಟಕ್ಕೆ ಬೇಸತ್ತು "ನಿನ್ನ ಹಾದೀ ನೀ ನೋಡಿಕೋ, ನನ್ನ ಹಾದಿ ನನಗೆ ಎನ್ನುತ್ತ

ಮನೆ ಬಿಟ್ಟು ಹೋದಳು. ನನ್ನ ತಾಯಿ ಇದನ್ನೆಲ್ಲ ನೋಡುತ್ತ ನಿಂತ ಆ ನನ್ನ ಅತ್ತಿಗೆ ನನಗೆ ನೋಡಲು ಚೆಂಡಿಯೋ, ಮಾರಿಯೋ ಎಂಬಂತೆ ತೋರಿದಳು. ಅವಳನ್ನು ಏನು ಮಾಡಲಿ ? ಎಂದು ಹಸಿದ ಹುಲಿಯಂತೆ ನಿಂತ ನನ್ನನ್ನು ನೋಡಿ ಗಾಬರಿಸಿದಳು. ಅಷ್ಟರಲ್ಲಿ ನನ್ನ ಮಗು ಅಶೋಕ ಬಂದು ಕಾಲಿಗೆ ತೆಕ್ಕೆ ಬಿದ್ದು " ಅಮ್ಮಾ ಹಸಿವೆ ಅಮ್ಮಾ ಹಸಿವೆ " ಎಂದು ಅಳಹತ್ತಿದನು.

" ಆಗ ಏನಾಯಿತು ? " ಎಂದು ಲಲಿತೆಯು ಪ್ರಶ್ನಿಸಿದಳು. ಇತ್ತ ಶಾಮರಾಯರಿಗೆ ತನ್ನ ಅಣ್ಣನಾದ ಪ್ರಭಾಕರನ ಜೀವನ ಸ್ಥಿತಿ ನೆನಪಾಗಿ ವಿಜಯಳ ಧ್ವನಿಯು ತನ್ನ ಅಣ್ಣನ ಹೆಂಡತಿಯ ಧ್ವನಿಯಂತೆ ಕೇಳಹತ್ತಿತು. ಅವರ ಕಣ್ಣಲ್ಲಿಯೂ ನೀರೊಡೆಯಿತು. " ನನ್ನ ಅಣ್ಣ...........ನನ್ನ ಅಣ್ಣ " ಎಂದು ಮನದಲ್ಲಿಯೇ ದು:ಖಿಸಿದರು.

" ಹಸಿದ ಮಗುವಿಗೆ ತುಣುಕು ಭಕ್ಕರಿ ಕೊಟ್ಟೆ ನಾನೂ ಅಣ್ಣನ ಕಾಲಿಗೆ ಎರಗಿ ಮನೆಯಿಂದ ಹೊರಬಿದ್ದೆ ಆಗ ನನ್ನ ಅಣ್ಣ ಯಾವದೂ ತೋಚದಂತೆ " ಎಲ್ಲಿ ? ಯಾಕೆ ? " ಎಂದು ಪ್ರಶ್ನಿಸಿದ. ಆದರೆ ಅದು ಒಂದೂ ಕೇಳದಂತೆ ನಾನು ಅಲ್ಲಿಂದ ಮಾಯವಾದೆನು. ಪುಣೆಗೆ ಬಂದು ಫಡಕೆಯವರಲ್ಲಿ ಕೆಲಸಕ್ಕೆ ನಿಂತೆ. ಮೈಯಲ್ಲಿ ಸರಿಯಿಲ್ಲದಕ್ಕೆ ಅವರ ಮನೆ-ಯಲ್ಲಿ ಸ್ಥಾನ ಸಿಗಲಿಲ್ಲ. ಹಾಗೆಯೇ ಒಂದು ಕೋಣೆ ಬಾಡಿಗೆ ಹಿಡಿದು ಬೀಡಿ ಕಾರಖಾನೆಯಲ್ಲಿ ಬೀಡಿ ಕಟ್ಟುತ್ತ ಅಶೋಕನ ವಿದ್ಯಾಭ್ಯಾಸ ನಡಿಸಿದೆ."

" ಈಗ ಆ ಮಗುವೆಲ್ಲಿದೆ ? " ಎಂದು ಲಲಿತೆ ಪ್ರಶ್ನಿಸಿದಳು.

" ಅವನು ದೊಡ್ಡವನಾದನು. ಇನ್ನೂ ಇಂಗ್ಲೀಷ ೫ ನೇ ಕ್ಲಾಸಿನಲ್ಲಿ ಓದುತ್ತಿದ್ದನು. ಒಂದು ದಿವಸ " ಅಮ್ಮಾ ನನ್ನ ತಂದೆ ಯಾರು ? " ಎಂದು ಕೇಳಿದನು. " ನಾನು ಅಲ್ಲಿಯವರೆಗೆ ಅವನಿಗೆ ಏನೂ ಹೇಳಿದ್ದಿಲ್ಲ. ಅಂದು ಅವನಿಗೆ ನನ್ನ ಜನ್ಮದ ಕಥೆ ಹೇಳಿದೆ. ಅದನ್ನು ಕೇಳಿ " ಅಮ್ಮಾ ಅವರು ನಿನ್ನನ್ನು ಅಷ್ಟು ಪ್ರೀತಿಸಿ ನೀನೇಕೆ ಹೋಗಲಿಲ್ಲ ? " ಎಂದು ಕೇಳಿದುದಕ್ಕೆ ನಾನು " ಮಗೂ ಅದು ನನ್ನ ತಪ್ಪಲ್ಲ, ನನ್ನ ತಾಯಿಯ ತಪ್ಪು. ನನ್ನ ತಾಯಿಯು ಹೋಗಗೊಡಲಿಲ್ಲ. ಅದಕ್ಕಾಗಿ ನಾನು ಹೋಗಲಿಲ್ಲ " ಎಂದೆನು.

“ ಹಾಗಾದರೇ ಅವರ ಮೇಲೆ ಪ್ರೀತಿಯಿರಲಿಲ್ಲವೇ ? ” ಎಂದು ಕೇಳಿದನು.

“ ಇತ್ತು ಆದರೆ...........ಆಗ ಹೋಗದಿದ್ದದ್ದೇ ತಪ್ಪಾಯಿತು. ಏನು ಮಾಡಲಿ ? ’’

“ ಹಾಗಾದರೆ ಅಮ್ಮಾ, ನೀನೇ ಅವರನ್ನು ಕೊಂದಂತಾಯಿತು ” ಅಂದ ಮೇಲೆ ನಿನ್ನ ಕೈಯಿಂದ ನಾನು ಉಣ್ಣೆನು ಎಂದು ಅಳುತ್ತ ಮಗು ಮನೆ ಬಿಟ್ಟು ಹೋದ. ಇಂದಿಗೂ ಪತ್ತೆಯಿಲ್ಲ. ಮುಂದೆ ಬೀಡಿ ಅಂಗಡಿ ಬಿಟ್ಟು ಇಲ್ಲಿಗೆ ಬಂದೆ. ಈ ತಾಯಿ ನನ್ನನ್ನು ಎತ್ತಿಕೊಂಡಳು. ’’ ಎಂದು ಕಣ್ಣೀರು ಒರಿಸುವಷ್ಟರಲ್ಲಿಯೇ ಪಡಸಾಲೆಯಲ್ಲಿ ಕೋಣೆಯ ಬಾಗಿಲು ಥಡಲ್ ಎಂದು ಸಪ್ಪಳವಾಯಿತು. ಲಲಿತೆ ವಿಜಯಳಿಬ್ಬರೂ ಗಾಬರಿ-ಯಾದರು. ತಮ್ಮ ಮೈಮೇಲಿನ ಸೆರಗನ್ನು ಸರಿ ಮಾಡಿಕೊಳ್ಳುತ್ತ ಸೆರಗಿನಿಂದ ಕಣ್ಣು ಒರೆಸಿಕೊಳ್ಳುತ್ತಿದ್ದರು. ಆಗ ಲಲಿತೆಯು ಕೋಣೆಯಲ್ಲಿ ಯಾರು ? ಎಂಬ ಪ್ರಶ್ನೆಯು ಮುಗಿಯುವವರಲ್ಲಿಯೇ ಶಾಮರಾಯರು ಕೋಣೆಯಿಂದ ಹೊರಬಂದರು.

ವಿಜಯಳನ್ನೇ ದಿಟ್ಟಿಸಿ ನೋಡುತ್ತಿದ್ದರು. ವಿಜಯಳಿಗೆ ಮೈದುನನಾದ ಶಾಮರಾಯನ ಗುರುತು ಸಿಕ್ಕಿತು. ಶಾಮರಾಯರಿಗೂ ಪ್ರೀತಿಯ ಅತ್ತಿ-ಗೆಯ ಗುರುತು ಹತ್ತಿತು. “ ಅತ್ತಿಗೆ ” ಎಂದು ಶಾಮರಾಯರು ವಿಜಯಳ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಿದರು. ಇಬ್ಬರ ಕಣ್ಣಲ್ಲಿಯೂ ನೀರೂರಿತು.

ಬಿನಾ ಎಲ್ಲವನ್ನೂ ದಿಟ್ಟಿಸುತ್ತಿದ್ದಳು. ಅವಳಿಗೆ ಏನೂ ತೋಚಲಿಲ್ಲ. ಆದರೆ ಇವರ ಅಣ್ಣನ ಹೆಂಡತಿ ಇರಬಹುದೆಂದು “ ಅಕ್ಕ ಎಂದು ಪಾದಕ್ಕೆ ರಗಿದಳು. ವಿಜಯಳು ತಂಗಿಯನ್ನು ಎಬ್ಬಿಸಿದಳು. ಪುನರ ಮಿಲನಕ್ಕಾಗಿ ಎಲ್ಲರೂ ಕುಲದೇವತೆಯಾದ ಶ್ರೀ. ವೆಂಕಟಪತಿಗೆ ನಮಸ್ಕಾರ ಮಾಡಲು ದೇವರ ಕೋಣೆ ಸೇರಿದರು.

---

# ೪ ಸಖನ–ಶೊ



ಗುಂತಕಲ್, ಗುಂತಕಲ್ ಅಂತಾ ಪೋರ್ಟರನು ಕೂಗುತ್ತಿದ್ದನು. ನನ್ನ ಇಚ್ಛೆಯ ಸ್ಟೇಶನ್ ಬಂದಿತು. ಜನರು ತಮ್ಮ ತಮ್ಮ ಸಾಮಾನು-ಗಳನ್ನು ಇಳಿಸಿಕೊಳ್ಳಲು ಆತುರರಾಗಿದ್ದರು. ರೇಲ್ವೆ ಹಮಾಲರು “ ಕೂಲಿ, ಕೂಲಿ ರಾವಸಾಹೇಬ ಅಂತಾ ಕೂಲಿಯುವರು ಆ ಡಬ್ಬಿಯಿಂದ ಈ ಡಬ್ಬಿಗೆ ಈ ಡಬ್ಬಿಯಿಂದ ಆ ಡಬ್ಬಿಗೆ ಓಡಾಡುತ್ತಿದ್ದರು.

ಹರೆಯದ ಹೆಣ್ಣು ಮಕ್ಕಳು ತಮ್ಮ ಮೈಮೇಲಿನ ಅರಿವೆಗಳನ್ನು ಸಾವರಿಸಿಕೊಳ್ಳುತ್ತ, ತಮ್ಮ ತಲೆಯನ್ನು ಬಾಚಿಕೊಳ್ಳುತ್ತ ತಮ್ಮ ತಮ್ಮ ಕೈಚೀಲಗಳನ್ನು ಹುಡುಕುತ್ತಿದ್ದರು. ಮುದುಕರು ಮಕ್ಕಳನ್ನು, ಮೊಮ್ಮಕ್ಕ-ಳನ್ನು ಬಯ್ಯುತ್ತ ಒದರುತ್ತ “ ತಡೆಯಿರಿ, ತಡೆಯಿರಿ ಎಲ್ಲರೂ ಇಳಿಯಲಿ ಆ ಮೇಲೆ ನಾವು ಸಾವಧಾನವಾಗಿ ಇಳಿಯೋಣ ” ಅಂತಾ ಎಚ್ಚರಿಕೆ ಕೊಡುತ್ತ ಸಾಮಾನುಗಳನ್ನು ಸಾವರಿಸುತ್ತಿದ್ದರು. ನನಗೂ ನನ್ನ ಸಾಮಾ-ನದ ಅರಿವಾಯಿತು. ದೊಡ್ಡ ಸ್ಟೇಶನ್ ಆದೇಕೆ ? ಜಂಕಶನ್ ಬಹಳ ಗದ್ದಲ. ನಾನು ನನ್ನ ಟ್ರಂಕನ್ನು ಕೈವಶ ಮಾಡಿಕೊಂಡು ಕೈಯಲ್ಲಿ ಛತ್ರಿ ತೆಗೆದುಕೊಂಡೆನು. ಇಳಿಯಬೇಕೆಂದರೆ ಇಳಿಯುವವರ ಗದ್ದಲ, ಹತ್ತುವವರ ಗದ್ದಲ ಈ ಬಗೆಯಾದ ಗದ್ದಲದಲ್ಲಿ ಸಿಕ್ಕು ಗಾಬರಿಯಾದೆ. ಯಾಕೆ ಈ ಹಾಳು ಪ್ರವಾಸ ಕೈಕೊಂಡೆನಪ್ಪಾ ? ಹಾಯಾಗಿ ಇನ್ನೂ ನಾಲ್ಕು ದಿವಸ ಬೆಳಗಾವಿಯಲ್ಲೇಕೆ ಕಳೆಯಲಿಲ್ಲವಲ್ಲಾ ? ಯಾವ ದೇವರು ಹೇಳಿದನಪ್ಪಾ ಈ ಗೆಳೆಯನ ಭೆಟ್ಟಿ, ಪಾಪ ಅವನಿಗೆ ನಾನು ಬರುವದು ತಿಳಿಸಿದ್ದರೆ ಅವನು ಸ್ಟೇಶನಕ್ಕೆ ಬರುತ್ತಿದ್ದ. ಅದನ್ನೂ ಮಾಡಲಿಲ್ಲ. ಅವನ ರೂಮು ? ಅದೂ ಗೊತ್ತಿಲ್ಲ. ಏನು ಈ ಪ್ರವಾಸ ? ” ಎಂದು ವಿಚಾರ ಮಾಡುತ್ತಿರುವಾಗಲೇ “ ರಾವಸಾಹೇಬ, ಕೂಲಿ ” ಎಂದನು. ನನ್ನ ಲಕ್ಷವು ಅವನೆಡೆಗೆ ಹೋಗು-ವದರಲ್ಲಿಯೇ ನನ್ನ ಟ್ರಂಕು ಅವನ ತಲೆಯೇರಿತ್ತು. ಹಾಗೂ ಹೀಗೂ ಪಾರಾಗಿ ಹೊರಬಂದೆ. ಆಗ ನನ್ನ ಮನಸ್ಸು ಸ್ವಲ್ಪ ಶಾಂತವಾಯಿತು. ಆದರೆ ಗೆಳೆಯ ಶೀನೂನನ್ನು ಹುಡುಕುವ ಬಗೆ ಹ್ಯಾಗೆ ? ಗುಂತಕಲ್

ಇದಂತೂ ನಮಗರಿಯದ ನಾಡು. ಸಣ್ಣ ಹಳ್ಳಿಯೇ ! ಯಾರನ್ನಾದರೂ ಕೇಳಿದರೆ ಹೇಳಬಹುದೇ ? ಎಂಬ ವಿಚಾರವು ತಲೆಯನ್ನು ತಿನ್ನಹತ್ತಿತು. ಅತ್ತ ಇತ್ತ ನೊಡಿದೆ ಮಗ್ಗುಲಲ್ಲಿ ಮಾರವಾಡಿಯ ಚಹದಂಗಡಿಯು ಕಂಡಿತು.

ಇಡ್ಲಿ, ಬೋಂಡಾ, ಚಟ್ನಿ ಮೊದಲಾದ ತಿಂಡಿಗಳು ನಮಗಾಗಿ ಸಿದ್ಧ ಮಾಡಿಕೊಂಡು ಮನೆಯ ಮಾವನಂತೆ ಬರುವ ಜನತೆಯನ್ನು ಆದರದಿಂದ ಬರಮಾಡಿಕೊಳ್ಳುತ್ತಿದ್ದನು. ನನಗೂ ಅವನ ಆಮಂತ್ರಣವು ಸಿದ್ಧವಾಗಿತ್ತು. ದೂರದ ಪ್ರವಾಸದಿಂದ ದಣಿದ ಶರೀರಕ್ಕೆ ಸ್ವಲ್ಪ ಆಹಾರ ಬೇಕಾಗಿತ್ತು. ಕೂಲಿಯವನನ್ನು ಕರೆದುಕೊಂಡು ಚಹದಂಗಡಿಯ ಬಾಗಿಲ ಪ್ರವೇಶಿಸಿದೆನು. ಮಾಣಿಯು " ಬನ್ನಿ ಸ್ವಾಮೀ, ಬನ್ನಿ ಎಂದು ಆದರದಿಂದ ಬರಮಾಡಿಕೊಂಡನು. ಕೂಲಿಗೆ ಸಾಮಾನು ಇಳಿಯಿಸಲು ಹೇಳಿ ನಾನು ಎರಡು ಇಡ್ಲಿ ತೆಗೆದುಕೊಂಡೆ. ಕೂಲಿಗೂ ಇಡ್ಲಿ ಕೊಡಿಸಿ " ತೆಗೆದುಕೋ " ಅಂತಾ ಹೇಳಿ ಎರಡು ಇಡ್ಲಿ ತಿಂದೆ. ನೀರು ಕುಡಿದು ಕಾಫೀ ತೆಗೆದುಕೊಂಡೆ ಮಾಣಿಯ ಬಿಲ್ಲು ಕೊಟ್ಟು ಹೊರಬಂದೆ. ಆದರೆ ಶೀನನ ಪತ್ತೆ ಹಚ್ಚುವ ಬಗೆ ಹೇಗೆ ? ಎಂಬುದು ದೊಡ್ಡ ಸಮಸ್ಯೆಯೇ ಆಯಿತು.

ಶೀನನು ನನ್ನ ಜೀವದ ಗೆಳೆಯ. ರೇಲ್ವೆ ಖಾತೆಯಲ್ಲಿ ನೌಕರಿಯಿದೆ. ಬಹಳ ದಿನಗಳಿಂದ ಅವನ ಭೆಟ್ಟಿಯಿರಲಿಲ್ಲ. ಏನೋ ರಜವಿದೆ ಭೆಟ್ಟಿಯಾಗೋಣ ಅಂತಾ ಬಂದೆ. ಆದರೆ ಈಗ ೬-೩೦ ಆಗಿದೆ. ಎಲ್ಲ ಆಫೀಸು ಬಿಟ್ಟು ಬಿಟ್ಟಿವೆ. ಎಂದು ವಿಚಾರ ಮಾಡಿ ಇಲ್ಲೇ ಎಲ್ಲಿಯಾದರೂ ರೇಲ್ವೆ ಕ್ವಾರ್ಟರದಲ್ಲಿರಬಹುದೆಂದು ಧೈರ್ಯ ತಂದುಕೊಂಡು ಅಲ್ಲಿಯ ಸ್ಟೇಶನ ಮಾಸ್ತರ ಬಳಿ ನನ್ನನ್ನು ಕರೆದುಕೊಂಡು ಹೋಗಲು ಹೇಳಿದೆ. ಕೂಲಿಯು ಕರೆದುಕೊಂಡು ಹೋದನು. ಸ್ಟೇಶನ ಮಾಸ್ತರನನ್ನು ಕಂಡು

" ನಮಸ್ಕಾರ ಸರ್ " ಎಂದೆ.

" What do you want " ಎಂದು ಇಂಗ್ಲೀಷದಲ್ಲಿ ಪ್ರಶ್ನಿಸಿದರು.

" I want Shree Shinu Kulkarni " ಎಂದೆ.

" Is it so " ಎಂದು ಮರು ಉತ್ತರ ಬಂದಿತು.

" Yes sir " ಎಂದೆ " ಅವರ ಬಳಿ ಕೆಲಸವಿದೆ. ಅವರಿಗೆ ಭೆಟ್ಟಿ-ಯಾಗಬೇಕಾಗಿದೆ ಸರ್ " ಎಂದೆ.

" ಆಫೀಸ ಛೋಡೆ, ವೆ ಘರಕೊ ಗಯೆ ಹೈ "

" ಅವರ ಮನೆ ಎಲ್ಲಿ ? "

" ಊರೊಳಗುಂಟು ಸ್ವಾಮೀ "

" ದಯಮಾಡಿ ಆವರ ಅಡ್ರೆಸ್ ಕೊಡಿ "

" ನನಗೆ ಗೊತ್ತಿಲ್ಲವಯ್ಯಾ, ಅವರು ಹೊಸಬರಿದ್ದಾರೆ. ಇಲ್ಲಿ ರೂಮು ಖಾಲಿ ಇದ್ದಿಲ್ಲ. ಆದ್ದರಿಂದ ಊರಲ್ಲಿಯೇ ರೂಮು ಮಾಡಿದ್ದಾರೆ. ಅಲ್ಲಿ ಯಾರನ್ನಾದರೂ ವಿಚಾರಿಸಿರಿ. ನನಗೆ ಕೆಲಸ ಬಹಳ " ಅಂತಾ ಸ್ಟೇಶನ ಮಾಸ್ತರರು ಹೋಗಿಯೇ ಬಿಟ್ಟರು. ಕೂಲಿಯವನು " ಸ್ವಾಮೀ ನನಗೆ ಬೇರೆ ಕೆಲಸಗಳಿವೆ; ನಿಮ್ಮ ಟ್ರಂಕ ಎಲ್ಲಿಡಲಿ ಹೇಳಿರಿ. ನಾನು ಹೋಗುವೆ " ಎಂದು ಗಡಿಬಿಡಿಸಿದನು. ಆಗ ಸೂರ್ಯನು ತಾಯಿಯ ಮಡಲಲ್ಲಿ ಸೇರು-ವದರಲ್ಲಿದ್ದನು. ಇನ್ನೂ ಶೀನೂನನ್ನು ಹುಡುಕಬೇಕೆಂದು ಹವಣಿಸಿದೆ. ಹೆಚ್ಚಿಗೆ ಕೂಲಿ ಕೊಡುವದಾಗಿ ಹೇಳಿ ಊರಲ್ಲಿ ಕರೆದುಕೊಂಡು ಹೋದೆ. ಪೇಟೆಯಲ್ಲಿ ಬಂದೆವು. ಒಂದು ದೊಡ್ಡ ಟೇಲರನ ಅಂಗಡಿ ಕಂಡಿತು. ಸಹಸಾ ನೌಕರ ಜನರು ಬೇಸತ್ತು ಬಂದು ಕೂಡುವದು ಟೇಲರ ಅಂಗಡಿಯಲ್ಲಿ. ನನ್ನ ಗೆಳೆಯನಂತೂ ಯಾವಾಗಲೂ ಟೇಲರ ಸಹವಾಸದವನು. ಬಹುತರ-ವಾಗಿ ಈ ಅಂಗಡಿಯಲ್ಲಿ ತಪಾಸ ಮಾಡಿದರೆ ತಿಳಿಯಬಹುದೆಂದು ಕೂಲಿ-ಯವನನ್ನು ಅಲ್ಲಿಯೇ ನಿಲ್ಲಿಸಿ ಅಂಗಡಿಯಲ್ಲಿ ಪ್ರವೇಶಿಸಿದೆ. ನನ್ನ ವೇಷ ಭೂಷಣಗಳನ್ನು ಕಂಡು ಯಾವದೋ ದೊಡ್ಡ ಗಿರಾಕಿಯು ನಮ್ಮ ಅಂಗಡಿಗೆ ಬಂದಿತೆಂದು ಹಲ್ಲು ಕಿರಿಯುತ್ತ " Come in sir " ಅಂತಾ ಬರ-ಮಾಡಿಕೊಂಡನು. " ಸ್ವಾಮೀ ತಮ್ಮಲ್ಲಿ ಹುಬ್ಬಳ್ಳಿ ಭಾಗದ ಕುಲಕರ್ಣಿ ಶೀನೂ ಅಂತಾ ರೇಲ್ವೆಯಲ್ಲಿ ನೌಕರ ಇದ್ದಾರೆ. ಪರಿಚಯವಿದೆಯೇ" ಎಂದು ಕೇಳಿದೆ. " ಗೊತ್ತುಂಟು ಅವರು ನಮ್ಮ ಗಿರಾಕಿ ಅಂತಾ ಟೇಲರನ ಬಾಯಿ-ಯಿಂದ ಕೇಳಿದ ಕೂಡಲೆ ಆನಂದವಾಯಿತು. " ಹಾಗಾದರೆ ಅವರ ಮನೆ ಎಲ್ಲಿ ? " ಅಂತಾ ಪ್ರಶ್ನಿಸಿದೆ. ಅದಕ್ಕೆ ಟೇಲರನು ಕೆಳಗೆ ಮೋರೆ ಮಾಡಿ " ನನಗೆ ಗೊತ್ತಿಲ್ಲವಯ್ಯಾ " ಎಂದನು. ಇನ್ನು ಅವರನ್ನು ಕಾಣಬೇಕಾದರೆ

ಎಲ್ಲಿ ವಿಚಾರ ಮಾಡಬೇಕಯ್ಯಾ ? ಈ ದಾರಿಯಿಂದ ತಿರುಗಾಡಲು ಜನ ಬರುತ್ತಿದ್ದಾರೆ. ಅವರೇ ಬರಬಹುದೋ ? " " ಅದನ್ನು ಹೇಳಲಿಕ್ಕೆ ಬರುವದಿಲ್ಲವಯ್ಯಾ ! ದಿನಾಲು ಇಲ್ಲಿಗೆ ಬರುತ್ತಿದ್ದರು. ಈಗ ಅವರು ಹಿಂದೀ ಪರೀಕ್ಷೆಗೆ ಕೂಡ್ರತಕ್ಕವರಿದ್ದಾರೆ. ಅದಕ್ಕಾಗಿ ಅಭ್ಯಾಸ ಮಾಡಹತ್ತಿದ್ದಾರೆ. " ಸವಡಿಲ್ಲ ಬರೋಣ ಆಗವು " ಅಂತಾ ಹೇಳಿದ್ದಾರೆ.

" ಅವರ ಗೆಳೆಯರ ರೂಮು ಗೊತ್ತಿದ್ದರೆ ಹೇಳಯ್ಯಾ ಅಲ್ಲಿಯಾದರೂ ಹೋಗಿ ವಿಚಾರ ಮಾಡುವೆ. "

" ಸ್ವಾಮೀ, ನಾವು ನಮ್ಮ ಕೆಲಸದಲ್ಲಿ ಹೆಚ್ಚಿಗೆ ವೇಳೆ ಕಳೆಯುತ್ತೇವೆ. ಅವರ ಗೆಳೆಯರ ರೂಮು ನನಗೆ ಗೊತ್ತಿಲ್ಲ. ಆದರೆ ಈ ಸಲೂನದಲ್ಲಿ ಅವರು ಕಷ್ಟ ಮಾಡಿಸಿಕೊಳ್ಳುತ್ತಾರೆ. ಅವರಿಗೆ ಗೊತ್ತಿದ್ದರೆ ಕೇಳಿ " ಅಂತಾ ಹೇಳುವ ಕೆಲಸವನ್ನು ಮುಗಿಸಿ ಕೆಳ ಮುಖ ಮಾಡಿ ಹೊಲಿಯಹತ್ತಿದನು. ಇನ್ನು ಇವನು ಬೇಸತ್ತನು. ಇವನ ಕೂಡ ಹೆಚ್ಚಿಗೆ ಚರ್ಚಿಸುವದು ಒಳಿತಲ್ಲವೆಂದು, ಆಯಿತು ಆ ಸಲೂನಿನ್ನಲ್ಲಿಷ್ಟು ವಿಚಾರಿಸಿ ಬಂದ ದಾರಿಗೆ ಸುಂಕವಿಲ್ಲೆಂದು ರಾತ್ರಿಯನ್ನು ಸ್ಟೇಶನದಲ್ಲಿ ಕಳೆದರಾಯಿತು. ಬೆಳಿಗ್ಗೆ ಹುಡುಕಿದರಾಯಿತು ಎಂದು ಆಲೋಚಿಸಿದೆ. ಆದರೆ ನನ್ನಂಥವನು ರಾತ್ರಿಯಲ್ಲಿ ಹುಡುಕುವದು ಆಗಲಿಲ್ಲ ಅಂತಾ ಕೈಬಿಟ್ಟರೆ ಎಂಥ ಅಪಹಾಸ್ಯ. ಆದ್ದರಿಂದ ಹುಡಿಕಿಯೇ ತೀರಬೇಕೆಂಬ ನಿರ್ಧಾರದೊಂದಿಗೆ ಹೊರಬಂದೆನು. ಕೂಲಿಯು ಟ್ರಂಕ ಇಳಿಸಿಕೊಂಡು ತಂಬಾಕ ಸೇದುತ್ತ ಗೂಕ್, ಗುಕ್ ಅಂತಾ ಕೆಮ್ಮುತ್ತ ಟ್ರಂಕಿನ ಮುಂದೆ ಕುಳಿತಿದ್ದನು. ನನ್ನನ್ನು ಕಂಡು " ಸ್ವಾಮೀ ಆಡ್ರೆಸ್ ತಿಳಿತೇ ? " ಎಂದ.

" ಇಲ್ಲ "

" ಮುಂದೆ ಹ್ಯಾಗೆ ? ಸ್ವಾಮಿ, ಪಕ್ಕದಲ್ಲಿಯೇ ಒಂದು ಉಡಪಿ ಭೋಜನಾಲಯವಿದೆ. ಅಲ್ಲಿ ಇಳಿದುಕೊಳ್ಳಿ. ನಾಳೆ ಹುಡುಕಿಕೊಳ್ಳಬಹುದು." ಎನ್ನುತ್ತ ಟ್ರಂಕನ್ನು ತಲೆಗೇರಿಸಿ ನನ್ನ ಬೆನ್ನು ಹಿಂದೆ ನಡೆದನು. ನಾನು ಮಾತ್ರ ಮೌನದಿಂದ ಕಡೆಗೆ ಈ ಆಶ್ರಮವೆರೆದು ಮನದಲ್ಲಿ ಮುಂದಿಗೆ ಮಾಡಿದೆನು.

ಸಲೂನ ಕಟ್ಟೆ ಹತ್ತಿದೆ. ಹಡಪಿಗನು ಹಸನ್ಮುಖನಾಗಿ ಬೀಡಿ ಕೈಯಲ್ಲಿಂದ ಕೆಳಗೆ ಚೆಲ್ಲುತ್ತ ರೇಜರವನ್ನು ತೊಗಲಿನ ಪಟ್ಟಿಗೆ ತಿಕ್ಕುತ್ತ ".ಬನ್ನಿ ಸರ್ " ಅಂತಾ ಬರಮಾಡಿಕೊಂಡು " ಏನು ದಾಡಿಯೋ ? ಕ್ರಾಪ್ ಮಾಡಬೇಕೋ ? " ಅಂತಾ ಪ್ರಶ್ನಾರ್ಥಕ ಮುದ್ರೆಯಿಂದ ಪ್ರಶ್ನಿಸಿದ.

" ಏನಿಲ್ಲ, ಇಲ್ಲಿ ಶೀನು ಕುಲಕರ್ಣಿ ಅಂತಾ ಹುಬ್ಬಳ್ಳಿ ಭಾಗದವರು ಬರುವರೋ ? ಎಂದೆ.

" ಬರುವರು, ಯಾಕೆ ? "

" ಯಾಕಿಲ್ಲ ನಾನು ಅವರ ಮಿತ್ರ ಅವರ ಮನೆಯ ಅಡ್ರೆಸ್ ಬೇಕಾಗಿದೆ " ಅದಕ್ಕಾಗಿ ಕೇಳಿದೆ ಎಂದೆ. " ಹೀಗೋ, ಅವರ ಮನೆ ಅಡ್ರೆಸ್ ಗೊತ್ತಿಲ್ಲ ಸರ್ ಸ್ಸಾರಿ " ಎಂದ.

" ಅವರು ಊಟ ಎಲ್ಲಿ ಮಾಡುವರು ತಮಗೆ ಗೊತ್ತಿದೆಯೇ ? "

" ಗೊತ್ತಿದೆ. "

" ಎಲ್ಲಿ " ಎಂದು ಪ್ರಶ್ನಿಸಿದೆ.

" ಇದೇ ಮರದಿಂದ ಆ ಬೇವಿನ ಮರದವರೆಗೆ ಹೋಗಿರಿ, ಅಲ್ಲಿಯ ರೈಟ ಸಾಯಿಡನಲ್ಲಿಯ ರೋಡ ಹಿಡಿದು ಹಾಗೇ ಪೋಗಿರಿ. ಮುಂದೆ ಲೆಫ್ಟ್ ಸಾಲಿನಲ್ಲಿಯ ಮೂರನೆ ಕಟ್ಟಡವೇ ರಾಘವೇಂದ್ರ ನಿವಾಸವೆಂಬ ತಲೆಬರೆಹದಿಂದ ತೋರುತ್ತದೆ. ಅಲ್ಲಿಯೇ ಊಟ ಮಾಡುವರು ಅಲ್ಲಿ ವಿಚಾರಿಸಿರಿ. ಊಟದ ವೇಳೆಯಾಗಿದೆ. ನಿಮಗೆ ದೊರೆತರೂ ದೊರೆಯಬಹುದು " ಅಂತಾ ಹೇಳಿದನು. ಅವನ ಮಾತಿನಿಂದ ಸ್ವಲ್ಪ ಧೈರ್ಯ ಬಂದಿತು. ಸಿಕ್ಕರೂ ಸಿಗಬಹುದೆಂದು ಕೂಲಿಯವನನ್ನು ಕರೆದುಕೊಂಡು ಅವನ ಹೇಳಿಕೆಯ ಮೇರೆಗೆ ರಾಘವೇಂದ್ರ ನಿವಾಸ ಭೋಜನಾಲಯವನ್ನು ಕಂಡೆ. ಎಲ್ಲ ಕಡೆಯಲ್ಲಿ ವಿದ್ಯುದ್ದೀಪಗಳು ಉರಿಯುತ್ತಿದ್ದವು. ಸಾಕಷ್ಟು ಜನರು ತೆಲಗು ಮಾತಾಡುವವರೇ ಕನ್ನಡ ಮಾತಾಡುವವರು ತೀರ ವಿರಳ. ಅಲ್ಲಿ, ಇಲ್ಲಿ ಮಾತ್ರ ಕಾಣುತ್ತಿದ್ದರು.

ಖಾನಾವಳಿಯನ್ನು ಪ್ರವೇಶಿಸಿದೆ. ಮ್ಯಾನೇಜರರು ಗಿರಾಕಿಯೆಂದು ತಿಳಿದು " ಸುಬ್ರಮ್ಮಣ್ಯ, ಗಿರಾಕಿಯ ಟ್ರಂಕ ತೆಗೆದುಕೋ " " ಪದ್ಮನಾಭ ಇವರಿಗೆ ಇರಲು ಏನು ಬೇಕು ಕೇಳು " ಅಂತಾ ಉಸುರಿದನು.

" ಸ್ವಾಮಿ, ಇಲ್ಲಿ ಶ್ರೀನು ಕುಲಕರ್ಣಿ ಅಂತಾ ಅಂಬುವವರು ಇಲ್ಲಿ ಊಟಕ್ಕೆ ಬರುವರೋ ? "

" ಅಹುದು, ಸರ್ "

" ಹಾಗಾದರೆ ಯಾವಾಗ ಬರುವರು ? "

" ೮ ಘಂಟೆಗೆ ಬರುವರು" ಎಂದು ಮ್ಯಾನೇಜರ ಹೇಳುವದೊಂದೇ ತಡ, ಪದ್ಮನಾಭನು ನಡುವೆಯೇ ಬಾಯಿ ಹಾಕಿ " ಈ ದಿನ ಮಂಗಳವಾರ ಅವರದು ಒಪ್ಪತ್ತೂಟ, ಅವರು ಬರುವದಿಲ್ಲ ಸ್ವಾಮೀ " ಅಂತಾ ಹೇಳಿಯೇ ಬಿಟ್ಟ. ಅದರಿಂದ ನನ್ನ ಮುಖ ಮತ್ತಿಷ್ಟು ಕಪ್ಪಿಟ್ಟಿತು. ದೂರದ ಪ್ರವಾಸ-ದಿಂದ ದಣಿದ ದೇಹಕ್ಕೆ ಬೇಜಾರವೇ ಬಂದಿತು. ಅಂತೂ ಇಲ್ಲಿ ಉಳಿದು-ಕೊಂಡರಾಯಿತು. ಅಂತಾ ವಿಚಾರ ಮಾಡಿದೆ. ಆದರೆ ನಾನೇನು ಅಲ್ಪ ಸಾಹಸಿಯೇ ? ನನಗೂ ನಾನು ಕವಿತೆಯನ್ನು ಪ್ರಾಥಮಿಕ ಶಾಲೆಯಲ್ಲಿ ಓದಿದ್ದು ನೆನಪಾಯಿತು. ಅದು ಅಷ್ಟೊಂದು ಮಹತ್ವದ್ದೇನೂ ಅಲ್ಲ. ಆದರೂ ಹೇಳುತ್ತೇನೆ. " ಒಂದು ಜೇಡವು ತನ್ನ ಬೀಡನು " ಎಂಬುದು ಆ ಜೇಡಿನಂತೆ ಇನ್ನೂ ಹುಡುಕುವ ಪ್ರಯತ್ನ ಮಾಡುವದಾಗಿ ಪಣ ತೊಟ್ಟು ಮ್ಯಾನೇಜರನನ್ನು ಕೇಳಿಯೇ ಬಿಟ್ಟೆ. " ಸ್ವಾಮೀ, ನನಗೆ ಕುಲಕರ್ಣಿಯ-ವರ ಭೆಟ್ಟಿಯಾಗಬೇಕಾಗಿದೆ. ಎಲ್ಲಿ ಸಿಗುವರು ? ಎಂದೆ

" ಮನೆಯಲ್ಲಿ ! "

" ಮನೆ ಎಲ್ಲಿ ? "

" ಆ ಸಮಾಚಾರ ಕೇಳಿಲ್ಲವಯ್ಯಾ " ಎಂದು ಗೋಣು ಅಲ್ಲಾಡಿ-ಸಿದನು.

" ನನಗೆ ಅರ್ಜಂಟ ಕೆಲಸವಿದೆ. ಅವರನ್ನು ಕಾಣಲೇಬೇಕಾಗಿದೆ. " ಎಂದು ಬಹಳ ಹೇಳಿಕೊಂಡೆ. ಕಡೆಗೆ ಪದ್ಮನಾಭನನ್ನು ಕರೆದು " ಇವರಿಗೆ ಆ ಪರೀಟನ ಮನೆ ತೋರಿಸು. ಅವನಿಗೆ ಕುಲಕರ್ಣಿಯವರ ಮನೆ ತೋರಿ-ಸಲು ಹೇಳು " ಎಂದ. " ನೀವು ಇವನ ಕೂಡ ಹೋಗಿ ಅವನು ನಿಮ್ಮ ವ್ಯವಸ್ಥೆ ಮಾಡಿಸುವನೆಂದು ದಯಾಸಾಗರನಂತೆ ನುಡಿದರು. ನನಗೂ ತುಂಬಾ ಆನಂದವಾಯಿತು. " ಮ್ಯಾನೇಜರರಿಗೆ ತುಂಬಾ ಖುಣಿ " ಅಂತಾ ಹೇಳಿ ಪದ್ಮನಾಭನ ಬೆನ್ನು ಹಿಡಿದೆ. ಕೂಲಿಯೂ ನನ್ನ ಬೆನ್ನು ಹಿಂದೆಯೇ ನಡೆ-ದನು. ಮೂವರೂ ಕೂಡಿ ಪರೀಟನ ಮನೆಯನ್ನು ಮುಟ್ಟಿದೆವು.

ಮನೆಯ ಬಾಗಿಲಲ್ಲಿ ರಾಸಭನನ್ನು ಕಟ್ಟಿಕೊಂಡು, ಕೈಯಲ್ಲಿ ಚುಟ್ಟಾ ಹಿಡಿದುಕೊಂಡು ರಂಗಸ್ವಾಮಿ ಕೆಮ್ಮುತ್ತ ಕುಳಿತಿದ್ದನು. ಪದ್ಮನಾಭನನ್ನು ಕಂಡು " ಸ್ವಾಮೀ, ಇನ್ನೂ ಬಟ್ಟೆ ತಯಾರವಾಗಿಲ್ಲಾ. ನಾಳೆ ಬೆಳಿಗ್ಗೆ ಕೊಡುವೆನು " ಅಂತಾ ಉಸುರಿದನು.

" ಇಲ್ಲವಯ್ಯಾ, ನಾವು ಬಟ್ಟೆ ಕೇಳಲು ಬಂದಿಲ್ಲಾ "

" ಹಾಗಾದರೆ ? ಯಾಕೆ ಸ್ವಾಮೀ ? ಏನು ವರ್ಕ ಇತ್ತೇ ? ಎಂದ.

" ಈ ಸ್ವಾಮಿಯವರಿಗೆ ಹುಬ್ಬಳ್ಳಿ ಭಾಗದ ಕುಲಕರ್ಣಿಯವರ ಭೆಟ್ಟಿ ಬೇಕಿತ್ತು. ಅವರ ಮನೆ ತೋರಿಸಲು ನಮ್ಮ ಮ್ಯಾನೇಜರ ಸ್ವಾಮಿಯವರು ನಿನ್ನ ಕಡೆಗೆ ಕಳಿಸಿದರು. ಅದಕ್ಕೆ ಬಂದೆವು. "

" ಹೀಗೋ ! ಹಾಗಾದರೆ ನಡೆಯಿರಿ. ಕಳಿಸಿ ಕೊಡುವೆ " ಎಂದು ರಂಗಸ್ವಾಮಿ ಬೀಡಿ ಜಗ್ಗುತ್ತ, ತಲೆಗೆ ಟಾವೆಲ ಸುತ್ತಿಕೊಂಡು ಮುಂದೆ ಮುಂದೆ ಹೊರಟನು. ನಾವು ಅವನ ಬೆನ್ನು ಹಿಡಿದು ನಡೆದವು. ಪದ್ಮನಾಭನು ಮಾತ್ರ ತನ್ನ ನಿವಾಸಕ್ಕೆ ಹೊರಟು ಹೋದನು.

ಸ್ವಲ್ಪ ದೂರ ಹೋಗುವಷ್ಟರಲ್ಲಿ ಕುಲಕರ್ಣಿಯ ರೂಮು ಬಂದಿತು. ರಂಗಸ್ವಾಮಿಯು ಕುಲಕರ್ಣಿಯವರನ್ನು ಕೂಗಿದನು. ಶೀನು ಹೊರಗೆ ಬಂದನು. ನನ್ನನ್ನು ನೋಡಿ ಬೆಪ್ಪನಾದ. " ಏನು ಪ್ರಭಾಕರ ! ನೀನು ಬರುವದು ತಿಳಿಸಬಾರದೆ ? ನಾನು ನಿಲ್ದಾಣಕ್ಕೆ ಬರುತ್ತಿದ್ದೆನಲ್ಲಾ ? " ಎಂದು ವಿಸ್ಮಯದಿಂದ ನುಡಿದನು.

" ಮಹಾರಾಯಾ ! ಅದೇ ತಪ್ಪಿಗೆ ಇಷ್ಟು ಪ್ರಾಯಶ್ಚಿತ್ತ " ಎನ್ನುತ್ತ ಗೆಳೆಯನ ಕೂಡ ಒಳಹೋದೆ. ಕೂಲಿ ಟ್ರಂಕನ್ನಿಳಿಸಿದ. ನಾನು ಒಂದು ರೂಪಾಯಿ ಕೊಡ ಹೋದೆ, ಆದರೆ ನನ್ನ ಮಿತ್ರ ತಾನೇ ಕೊಟ್ಟನು. ಅಂತೂ ಪ್ರವಾಸದ ಪ್ರಯಾಸವನ್ನು ಹೇಳಿದೆ. ಗೆಳೆಯನು ಹೊಟ್ಟೆ ಹುಣ್ಣಾಗುವಂತೆ ನಕ್ಕ.

ನೀವೂ ನಿಮ್ಮ ಗೆಳೆಯರನ್ನು ಹುಡುಕುವಾಗ ನನ್ನನ್ನೇ ಅನುಸರಿಸಿರಿ. ಮರೆಯಬೇಡಿ, ನಿಮ್ಮ ಮಿತ್ರರಿಗೆ ನನ್ನ ಪ್ರವಾಸದ ಪರಿತಾಪವನ್ನು ಹೇಳಿ, ನಕ್ಕು ನಲಿಯಿರಿ. "

# ೫ ಪ್ರೇಮ.



“ ಕುಲಕರ್ಣಿ........ಕುಲಕರ್ಣಿ........ಎಂದು ಡಾಕ್ಟರ ರಾಮಚಂದ್ರರಾಯರು ಒಂದೇ ಸವನೆ ಕಿರುಚಿದರು. ಕುಲಕರ್ಣಿಯು ೧೦ ನೇ ನಂಬರದ ರೋಗಿಗೆ ಔಷಧ ಕೊಡುತ್ತಿದ್ದನು. ಡಾಕ್ಟರರ ಬಿರುಸಾದ ಸ್ವರವು ಕುಲಕರ್ಣಿಯ ಕಿವಿಯನ್ನು ಆಶ್ರಯಿಸಿತು. ಕೈಯಲ್ಲಿನ ಮದ್ದಿನ ಬಟ್ಟಲವನ್ನು ಎದುರಿನ ಟೇಬಲಿನ ಮೇಲೆ ಇಡುತ್ತ “ ಓ, ಬಂದೆ ! ” ಎಂದು ಕುಲಕರ್ಣಿಯು ಧಾವಿಸಿದನು. ರಾಮರಾಯರು ಕುಲಕರ್ಣಿಯ ಬರುವನ್ನು ಕಂಡು ‘ ಏನಿಲ್ಲ, ನನಗೆ ಈಗ ಡಿಲಿವ್ಹರಿ ಕೇಸಿಗೆ ಹೋಗಬೇಕಾಗಿದೆ. ಎಲ್ಲ ಸಾಮಾನುಗಳನ್ನು ಹಾಕಿರಿ ” ‘ ಹುಂ ’ ಎನ್ನುತ್ತ ಕುಲಕರ್ಣಿ ರೂಮು ಸೇರಿದನು.

೧೦ ನೇ ನಂಬರದ ಕಾಟಿನ ಕೇಸು ಕೆಮ್ಮುತ್ತ ಎದ್ದು ಕುಳಿತು “ಡಾಕ್ಟರಸಾಬ, ನನಗೆ ಇನ್ನೂ ಎಷ್ಟು ದಿವಸ ಇರಬೇಕಾಗುವದು ” ಎಂದು ಕೇಳಿದನು.

ಡಾಕ್ಟರ ರೋಗಿಯ ಬಳಿಗೆ ಬಂದು ಅವನ ಪರೀಕ್ಷೆ ಮಾಡಿ “ಔಷಧ ತೆಗೆದುಕೊಂಡಿಯೋ ಹ್ಯಾಗೆ ? ” ಎಂದು ಗಂಭೀರ ಮುದ್ರೆಯಿಂದ ಪ್ರಶ್ನಿಸಿದರು.

“ ಯಾಕೆ ”

“ ಇನ್ನು ಔಷಧ ಕೊಡಬೇಕೆಂದು ಕಂಪೌಂಡರ ಸಾಬರು ಬಂದಿದ್ದರು. ಅಷ್ಟರಲ್ಲಿಯೇ ತಾವು ಒದರಿದಿರೆಂದು ತಮ್ಮೆಡೆಗೆ ಹೋದರು. ಔಷಧ ಇಲ್ಲಿಯೇ ಹಾಕಿ ಇಟ್ಟಿರುವರು. ” ಎಂದು ಕೈಸನ್ನೆ ಮಾಡಿ ಔಷಧ ತೋರಿಸಿದನು.

ಡಾಕ್ಟರರು ಔಷಧವನ್ನು ಕೊಡುತ್ತ “ ನೋಡಪಾ, ನೀನು ಇನ್ನೂ ಒಂದು ತಿಂಗಳು ನಮ್ಮಲ್ಲಿ ಉಳಿದರೆ ನಾನು ಕಡಿಮೆ ಮಾಡಿ ಕಳಿಸುವೆನು. ಇಲ್ಲದಿದ್ದರೆ ನನ್ನ ಜವಾಬ್ದಾರಿಯಲ್ಲ ನೋಡು ” ಎಂದು ಹೇಳಿದರು.

ಇದನ್ನು ಕೇಳಿ ೧೦ ನೇ ನಂಬರ ಪೇಶಂಟು ಗಾಬರಿಸಿ ಡಾಕ್ಟರರ ಮುಖ ನೋಡಹತ್ತಿದನು. ಇನ್ನು ತಿಂಗಳು ನಾನು ಇಲ್ಲಿ ಉಳಿದರೆ ನನಗೆ ಖರ್ಚು ಹೇಗೆ ಸಾಧ್ಯ? ಎಂಬ ವಿಚಾರವು ಅವನ ತಲೆ ತಿನ್ನಹತ್ತಿತು. ಇತ್ತ ಡಾಕ್ಟರರಿಗೆ "ಈ ರೋಗಿ ಬೇಗ ಹೊರಟು ಹೋದರೆ ನಮಗೆ ಬರಬೇಕಾದಷ್ಟು ಹಣ ಬರುವ ಬಗೆ ಹೇಗೆ? ಹೇಗಾವರೂ ಮಾಡಿ ನಾಲ್ಕು ದಿವಸ ರೋಗಿಗಳನ್ನು ಹೆಚ್ಚಿಗೆ ಇಟ್ಟುಕೊಂಡರೆ ರೋಗಿಗೂ ಗುಣ ನಮ್ಮ ಖಜಾನೆಗೂ ಆರೋಗ್ಯ. ಇಂಥ ವ್ಯಕ್ತಿಗಳನ್ನು ಸುಲಿಯದೆ ನಾವಾದರೂ ಯಾರನ್ನು ಸುಲಿಯಬೇಕಾಗಿದೆ?" ಎನ್ನುತ್ತ ವಿಚಾರದಲ್ಲಿರುವಾಗಲೇ ಕುಲಕರ್ಣಿಯು ಬ್ಯಾಗ್ ತುಂಬಿ ತೆಗೆದುಕೊಂಡು ಬಂದನು.

"ಏನು, ಎಲ್ಲವೂ ಹಾಕಿದಿರಾ? ರೋಗಿಗಳನ್ನು ಸಂಭಾಳಿಸಿಕೊಂಡು ಹೋಗಿ, ಸಂಜೆಗೆ ಬರುವೆ. ಬಾಬುನನ್ನು ಕರೆಯಿರಿ. ಮೋಟಾರ ಚಾಲೂ ಮಾಡಲು ಹೇಳಿರಿ. ಸಾವುಕಾರ ಶಂಕ್ರೆಪ್ಪನವರನ್ನು ಕರೆಯಿರಿ. ಹೊರಡುವೆನು. ಎಲ್ಲವನ್ನೂ ಸರಿಯಾಗಿ ಸಾಗಿಸಿಕೊಂಡು ಹೋಗಿರಿ. ಹೊಸ ಪೇಶಂಟ ಬಂದರೆ ಹೊರಗೆ ಬಿಡಬೇಡಿರಿ. 'ಈಗ ಬರುವರು' ಎಂದು ಹೇಳಿರಿ" ಅನ್ನುತ್ತ ಬಾಗಿಲದ ಹೊರಗೆ ಡಾಕ್ಟರ ಸಾಹೇಬರು ನಡೆದರು. ಸಾಹುಕಾರ ಶಂಕ್ರೆಪ್ಪನವರು ಬಂದು ಬ್ಯಾಗ ಕೈಯಲ್ಲಿ ಇಸಿದು ಕೊಂಡು "ನರ್ಸ, ಎಲ್ಲಿ?"

"ಹೋ, ನರ್ಸ ಬೇಕೇನು ನಿಮಗೆ."

"ಹೌದು ಸರ್"

ಎಷ್ಟಾವರೂ ಹೆಣ್ಣುಮಕ್ಕಳ ಬೇನೆಗೆ ಹೆಣ್ಣು ಮಕ್ಕಳಿದ್ದರೆ ಅವರು ನಾಚುವದಿಲ್ಲ. ಅವರಲ್ಲಿಯೂ ನಮ್ಮ ಹಳ್ಳಿಯ ಹೆಣ್ಣು ಮಕ್ಕಳು ಮರ್ಯಾದೆಗಾಗಿ ಜೀವ ಕೊಡುವರು ಹೊರತು ಮಾನಾ ಬಿಡುವದಿಲ್ಲ. ನೀವು ಇಂಜೆಕ್ಸನ್ ಔಷಧ ಕೊಡ್ರಿ. ಪ್ರಸಂಗ ಬಿದ್ದರೆ ನರ್ಸ ಅವರಿಂದ ಪಡೆಯಿಸುವ ಕೆಲಸ ಮಾಡಿಸಿರಂತೆ. ಬೇಕಾದಷ್ಟು ಬೀಳಲಿ ಕೊಡುವೆ" ಎಂದು ಶಂಕ್ರೆಪ್ಪನವರು ಸ್ಪಷ್ಟ ಹೇಳಿದರು.

"ಹಾಗಾದರೆ ನಮ್ಮ ದವಾಖಾನೆಯಲ್ಲಿ ನರ್ಸ ಇಲ್ಲ."

" ಉಪಾಯವಿಲ್ಲ. ನಾನು ಬೇರೊಬ್ಬರ ದವಾಖಾನೆಗೆ ಹೋಗುವೆ " ಎಂದು ಶಂಕ್ರೆಪ್ಪ ಗಡಿಬಿಡಿಯಿಂದ ಬೇರೆಡೆಗೆ ತೆರಳಿದನು.

ಶಂಕ್ರೆಪ್ಪನು ಹೋದ ಹಾದಿಯನ್ನೇ ನೋಡುತ್ತ ಸಿಂತ ಡಾಕ್ಟರರಿಗೆ " ನರ್ಸ ಇಲ್ಲದ್ದರಿಂದ ತನ್ನ ಪೇಶಂಟು ಇನ್ನೊಬ್ಬರಿಗೆ ಹೋಯಿತು. ಅದು ನನ್ನ ಪೆಟ್ (Pet) ಪೇಶಂಟು ಕನಿಷ್ಠ ನೂರಿನ್ನೂರು ರೂಪಾಯಿ ಕೊಡುವ ಗಿರಾಕಿ ಇಂಥ ಪ್ರಸಂಗದಲ್ಲಿ ನರ್ಸ ಇಲ್ಲದಿದ್ದರೆ ಈ ಬಗೆಯ ತ್ರಾಸುಗಳು ಆಗುವವು. " ಎನ್ನುತ್ತ ಪೆಟ್ಟಿಗೆಯನ್ನು ತೆಗೆದುಕೊಂಡು ಡಾಕ್ಟರರು ಖುರ್ಚಿಗೆ ಬಂದು ಆಶ್ರಯಿಸಿದರು.

ಕುಲಕರ್ಣಿಗೆ ಏನೂ ತೋಚದಾಯಿತು. " ಯಾಕೆ ತಿರುಗಿ ಬಂದರು ಸಾಹೇಬರು? ಗಿರಾಕಿ ಕೈಯಲ್ಲಿ ಹಣ ಕೊಡಲಿಲ್ಲವೇ? ಬೆಕ್ಕು ಅಡ್ಡ ಬಂದಿತೇ? ಏನು? " ಎಂದು ವಿಚಾರ ಮಾಡುತ್ತ ಡಾಕ್ಟರ ಬಳಿ ಸಾಗಿದನು.

ಕುಲಕರ್ಣಿಯು ಬರುವನ್ನು ಕಂಡು ಡಾಕ್ಟರರು " ಕುಲಕರ್ಣಿ, ನಾನು ಹೋಗುವದನ್ನು ಕ್ಯಾನ್ಸಲ್ ಮಾಡಿದೆ. ದವಾಖಾನೆಯಲ್ಲಿ ರೋಗಿಗಳು ಬಹಳ. ನಿಮ್ಮೊಬ್ಬರ ಮೇಲೆ ಬಿಟ್ಟು ಹೋಗುವದು ಲೇಸಲ್ಲವೆಂದು ತಿರುಗಿ ಬಂದೆ. ಮತ್ತೇನಿಲ್ಲ. " ಎಂದು ವಿಚಾರವಲ್ಲಿ ಮುಳಗಿ ಜಿಪುಣಾ-ಗ್ರೇಸಿಯು ತನ್ನ ಮರ್ಯಾದೆ ಉಳಿಸಿಕೊಂಡನು.

" ಬಹಳೇ ಒಳಿತಾಯಿತು. ಕೆಲವು ಪೇಶಂಟುಗಳು ಸೀರಿಯಸ್ ಸ್ಥಿತಿಯಲ್ಲಿವೆ. "

" ಹಾಗಾದರೆ ಅವರ ಬಿಲ್ಲು ಸಿನ್ನಿನ ವರೆಗೂ ವಸೂಲ ಮಾಡಿರಿ. ಪೇಶಂಟು ತೀರಿಕೊಂಡಿತೆಂದರೆ ಹಣ ಕೇಳಲು ಆತಂಕವಾಗುವದು. ಅದಕ್ಕಾಗಿ ಮೊದಲು ವಸೂಲಿ ಕೆಲಸ ಮಾಡಿರಿ. " ಎಂದು ಹೇಳುತ್ತ ಮಾತು ಬದಲಾಯಿಸಿ " ಮೊನ್ನೆ ನೀವು ಹೇಳುತ್ತಿದ್ದಿರಲ್ಲಾ. ೨೫ ರೂಪಾಯಿ ಮೇಲೆ ಓರ್ವ ನರ್ಸ ಇದ್ದಾಳಂತೆ. ಅವಳನ್ನು ತಾತ್ಪೂರ್ತಿಕ ಕೆಲಸಕ್ಕೆ ಸೇರಿಸಿಕೊಳ್ಳೋಣ ಹೇಗೆ? ನಿಮಗೇ ಅನುಕೂಲವಾಗುವದು. "

" ಸೇರಿಸಿಕೊಂಡರೆ ದವಾಖಾನಗೆ ಭೂಷಣ. "

" ಈಗ ಭೂಷಣ ಬೇಕಾಗಿಲ್ಲ. ಹಣ ಬರುವದೊಂದೇ ನಮ್ಮ ವಿಚಾರ."

" ನರ್ಸ ಇದ್ದರೆ ಹೆಣ್ಣುಮಕ್ಕಳ ಕೇಸುಗಳು ಸಾಕಷ್ಟು ಬರುವವು."

" ಅವಕ್ಕಾಗಿ ನಾನು ಕೇಳುವದು ನರ್ಸಳ ಪಗಾರ ತೇಲಿ ಮತ್ತೆ ಫಾಯ್ದೆ ಆಗಬೇಕು. ಅಂದರೆ ಸೇರಿಸಿಕೊಳ್ಳಲು ಉತ್ತಮ."

" ಆಗಬಹುದು."

" ಬಹುದು ಬೇಡ ನಿಶ್ಚಯಾರ್ಥಕದ ಮಾತು ಹೇಳಿರಿ."

" ನಿಶ್ಚಯವಾಗಿಯೂ ಆಗುವದು. ಮತ್ತಿನ್ನೇನು ?" ಎಂದು ಕುಲಕರ್ಣಿಯು ಉಸುರಿದನು.

" ಹಾಗಾದರೆ ಈ ಕಾರು ತೆಗೆದುಕೊಂಡು ಹೋಗಿ, ಈಗಲೇ ಕರೆದುಕೊಂಡು ಬನ್ನಿ" ಎಂದು ಹೇಳಿ ಡಾಕ್ಟರರು ಎದ್ದು ಹೋದರು.

" ನಮ್ಮ ಡಾಕ್ಟರರಿಗೆ ಈ ಹೊತ್ತೇಕೆ ನರ್ಸ ಬೇಕಾದಳು? ನಾನು ಅನೇಕ ಸಲ ಹೇಳಿದ್ದೆ. ಆದರೆ ಒಮ್ಮೆಯೂ ಅನುಮತಿ ಕೊಟ್ಟಿದ್ದಿಲ್ಲ. ಈ ದಿವಸ ಏನಾಯಿತು? ಬಹುತರ ಡಿಲಿವ್ಹರಿ ಪೇಶಂಟದವರು ನರ್ಸ ಇಲ್ಲದಿದ್ದರೆ ಬೇಡೆಂದಿರಬೇಕು. ಅದ್ದರಿಂದಲೇ ಈ ಜಿಪುಣನು ನರ್ಸ ತರಲು ಹೇಳಿದ" ನೆಂದು ಬಗೆದು ಬಾಬೂನ ಕಾರು ತೆಗೆದುಕೊಂಡು ನರ್ಸಳನ್ನು ಕರೆಯಲು ಕುಲಕರ್ಣಿಯು ಹೋದನು.

## ೨

ದಿನದಂತೆ ಕೆಲಸ ತೀರಿಸಿಕೊಂಡು ಹೆಂಡತಿಯ ಔಷಧದ ಬಾಟಲಿಯನ್ನು ತೆಗೆದುಕೊಂಡು ದಣಿದ ಭಾರವಾದ ಕಾಲುಗಳನ್ನು ಹೊತ್ತುಕೊಂಡು ಕುಲಕರ್ಣಿಯು ಮನೆಗೆ ಬಂದನು. ಕಾಟದ ಮೇಲೆ ನರಳುತ್ತ ಶೀಲೆಯು ಮಲಗಿದ್ದಳು. ಗಂಗಮ್ಮನವರು ಬಿಸಿ ನೀರು ಕುಡಿಸುತ್ತಿದ್ದರು. ಮಗನ ಬರುವನ್ನು ಕಂಡು ಗಂಗಮ್ಮನವರ ಕಣ್ಣಲ್ಲಿ ನೀರು ಬಂದವು. ಅವುಗಳನ್ನು ಅವನಿಗೆ ಕಾಣಿಸದಂತೆ ಒರಸಿಕೊಂಡು " ಶೀನು ತಡವೇಕೆ ?"

" ಯಾಕಿಲ್ಲವಮ್ಮಾ, ಸ್ವಲ್ಪ ಹೆಚ್ಚಿನ ಕೆಲಸವಿತ್ತು. ಅದಕ್ಕೆ ತಡವಾಯಿತು." ಅನ್ನುತ್ತ ಬಾಟಲಿಯನ್ನು ಕಿಡಿಕಿಯಲ್ಲಿ ಇಡುತ್ತ ಉಸುರಿದನು.

" ಏನು ಮಹತ್ವದ ಕೆಲಸವಿತ್ತೇನು ? ಯಾರದಾದರೂ ಆಪರೇಶನ್ ಇತ್ತೇನು ? " ಎಂದು ಮಗನ ಮುಖವನ್ನು ನೋಡಹತ್ತಿದಳು.

" ಏನಿಲ್ಲ. ಈ ಹೊತ್ತು ಮಂಗಳವಾರ ಪೇಟೆಯ ಸಾಠೆ ಕಮಲಳನ್ನು ಕೆಲಸಕ್ಕೆ ಸೇರಿಸಿಕೊಂಡೆವು. "

" ಯಾಕೋ ? ಅವಳೇಕೆ ಕೆಲಸಕ್ಕೆ ಸೇರಿದಳು ? ಅವಳ ಗಂಡನಿಗೆ ಇನ್ನೂರು, ಮುನ್ನೂರ ರೂಪಾಯಿ ಪಗಾರವಿತ್ತಲ್ಲ ? " ಎಂದರು ಗಂಗಮ್ಮನವರು.

" ಹೌದು. ಇತ್ತು ಈಗ ಅವರಿಗೆ ಟಿ. ಬಿ. ಆಗಿದೆ. ನವಕರಿ ಇಲ್ಲ. ಅದಕ್ಕಾಗಿ ಬಾಳುವೆ ಬಹಳೇ ಬಡತನದ್ದಾಗಿದೆ. ಅದಕ್ಕಾಗಿ ಅವಳು ನರ್ಸ ಕೋರ್ಸ ಮುಗಿಸಿದ್ದಾಳೆ. ಬಡವಿಯೆಂದು ಕೆಲಸಕ್ಕೆ ಸೇರಿಸಿಕೊಂಡೆವು. " ಎಂದು ಹೇಳಿ ಜಳಕದ ಕೋಣೆಗೆ ಹೋದನು. ನೀರು ಆರಿ ತಣ್ಣಗಾಗಿದ್ದವು. ಹಾಗೇ ಅವನ್ನು ಬಳಸಿಕೊಂಡು ಎಡೆಯ ಮುಂದೆ ಬಂದು ಕುಳಿತನು.

" ಶೀನೂ, ನಿನ್ನ ಹೆಂಡತಿಯ ಜತ್ತಿಗೆ ಡಾಕ್ಟರರು ಏನನ್ನುವರಪ್ಪಾ ? " ಎಂದು ಗಂಗಮ್ಮನವರು ಕಣ್ಣಲ್ಲಿ ನೀರು ತಂದರು.

" ಅಮ್ಮಾ ಅವರೇನು ದೇವರs, ಅವರೇನು ಮಾಡುವರು ? ಪ್ರಕ್ಕಾಪಿಯಾಗಿ ಔಷಧ ಇಂಜೆಕ್ಷನ್ ಕೊಡತಾರೆ ತೀರಿಹೋಯಿತು. ಹಣೆಯಲ್ಲಿ ಬರೆದಂತೆ ಆಗಲಿ ಬಿಡಮ್ಮಾ ಅದಕ್ಕೆ ದುಃಖಿಸಿದರೆ ಆಗುವದೇನು ? ನಮ್ಮ ನಮ್ಮ ದೈವ ನಮ್ಮ ಕೂಡ. ಯಾರೇನು ಮಾಡುವರು ? "

" ಅದೆಲ್ಲಾ ನಿಜ, ಆದರೆ ? "

" ಆದರೆ, ಮತ್ತು, ಏನೂ ಇಲ್ಲಮ್ಮಾ ಎರಡು ಹೊತ್ತು ಉಣ್ಣುವದು. ಹತ್ತಿದಷ್ಟು ದುಡಿಯುವದು ಇಷ್ಟೇ ನೋಡು. " ಎಂದು ಬೇಜಾರದಿಂದ ತಟ್ಟೆಯಲ್ಲಿಯ ಅನ್ನವನ್ನು ಬಾಯಲ್ಲಿ ಸುರುವಿಕೊಂಡು ಕೈ ತೊಳೆಯಲು ಹೊರ ಹೋದನು.

ಕಮಲಳಿಗೆ ವಯಸ್ಸು ( ೧೮ ) ಹದಿನೆಂಟು. ಕೆಂಪಾದ ಮುಖ ಬಳಕುವ ದೇಹ. ನಿಡಿದಾದ ಮೂಗು, ಉಂಗುರುಗೂದಲು ನೋಡಲು ನಾಲ್ಕು ಮಂದಿಯಲ್ಲಿ ಚನ್ನಾಗಿ ಕಾಣುತ್ತಿದ್ದಳು. ತನ್ನ ಪತಿ ದೇವನ

ಭವಿಷ್ಯತ್ತಿಗಾಗಿ ಅವನ ಉಪಚಾರಕ್ಕಾಗಿ ನವಕರಿ ಸ್ವೀಕರಿಸಿ ಅವನನ್ನು ಬದುಕಿಸುವ ಹವ್ಯಾಸ ಅವಳದಾಗಿತ್ತು.

ಕಮಲಳು ಹಾಗೂ ಕುಲಕರ್ಣಿ ಇಬ್ಬರೂ ದವಾಖಾನೆಯ ಕೆಲಸವನ್ನು ಬಹಳೇ ಜಾಗರೂಕ ರೀತಿಯಿಂದ ನಡೆಸಿಕೊಂಡು ನಡೆದರು. ಪೇಶಂಟುಗಳಿಗೆ ಕಮಲಳೆಂದರೆ ತಾಯಿಯಂತೆ. ಮಂದಹಾಸದ ನಗೆಯನ್ನು ಬೀರುತ್ತ ಅವರನ್ನು ಸಮಾಧಾನಪಡಿಸುತ್ತಿದ್ದಳು. ಡಾಕ್ಟರರಿಗೂ ಅವರ ಕೆಲಸದಲ್ಲಿ ಒಳ್ಳೇ ಸಲಹೆಗಳಿಂದ ತನ್ನ ಜಾಣತನವನ್ನು ಪ್ರದರ್ಶಿಸುತ್ತಿದ್ದಳು. ಇದರಿಂದ ಕುಲಕರ್ಣಿ ಕಂಪೌಂಡರನಿಗೂ, ಡಾಕ್ಟರರಿಗೂ ಬಹಳೇ ಬೇಕಾದಳು.

ಕಮಲಳಿಗೆ ಪಗಾರವಾಯಿತು. ಗಳಿಕೆಗೆ ಕಡಿಮೆಯಿಲ್ಲ. ತಿನ್ನಲು ಉಣ್ಣಲು, ಉಡಲು ತೊಡಲು ಕಡಿಮೆಯಿಲ್ಲ. ಆದರೆ “ಗಂಡನೊಬ್ಬ ರೋಗಿ. ವಯದಲ್ಲಿ ಹೆಣ್ಣಿಗಾಗಲಿ, ಗಂಡಿಗಾಗಲಿ ಶರೀರ ಸಂಪತ್ತು ಮಹತ್ವದ್ದು. ದೇವರು ಎಲ್ಲವನ್ನೂ ಕೊಟ್ಟರೂ ಮನದ ತಾಪ ಸಹಿಸುವ ಬಗೆ ಹೇಗೆ? ಅನಾಚಾರಿಯಾಗಲೇ? ಆಚಾರ ಶೀಲಳಾಗಿ ಮನದ ತಾಪ ಸಹಿಸುವ ಬಗೆ ಹೇಗೆ? ಅನಾಚಾರಿಯಾಗಲೇ? ಆಚಾರ ಶೀಲಳಾಗಿ ಮನದ ತಾಪ ಸಹಿಸಲೇ? ಎಲ್ಲಿಯವರೆಗೆ ಸಹಿಸುವದು? ನನ್ನ ಪಾಡು ಹೀಗೆ ನಮ್ಮ ಕಂಪೌಂಡರ ಪಾಡೂ ಹೀಗೇ ಪಾಪ! ಅವರದಾದರೂ ಏತರ ಜೀವನ? ರಸವಿಲ್ಲದ ಬಾಳು ಬೆಳಗಿವರೇನು? ಬಾಡಿವರೇನು?” ಎಂಬ ವಿಚಾರಗಳು ಕಮಲಳ ತಿನ್ನಹತ್ತಿದವು.

ಇತ್ತ ಕುಲಕರ್ಣಿಯು ಬಾಳಿನಲ್ಲಿ ಹುರುಳಿಲ್ಲವೆಂದು ನಿರಾಶೆಯಿಂದ ಕಾಲ ಕಳೆಯುತ್ತಿದ್ದನು. ಕಮಲಳು ದವಾಖಾನೆಗೆ ಬಂದಂದಿನಿಂದ ಒಂದು ಬಗೆಯ ಆನಂದ ಅವಳ ಸಹವಾಸದಲ್ಲಿ ಒಂದು ಬಗೆಯ ನೆಮ್ಮದಿ. ಅದರಿಂದ ಕುಲಕರ್ಣಿಯೂ ಪ್ರಕೃತಿಯಲ್ಲಿ ಬಲಗೊಂಡನು. ಬುದ್ಧಿಯೂ ಹೆಚ್ಚಿಗೆ ಕೆಲಸ ಮಾಡಹತ್ತಿತು.

ಕುಲಕರ್ಣಿ ಬಿಟ್ಟು ಕಮಲಳಿಗೂ, ಕಮಲಳನ್ನು ಬಿಟ್ಟು ಕುಲಕರ್ಣಿಗೂ ಇರುವದು ಅಸಾಧ್ಯವೆನಿಸಹತ್ತಿತು. ಎರಡೂ ತರುಣ ಜೀವಿಗಳು. ಅವರಿಗೆ ಮನೆಗೆ ಹೋಗುವದರಿಂದಾಗುವ ಅಗಲುವಿಕೆಯು ಬಹಳೇ ಮನೋವೇದನೆಯನ್ನು ಮಾಡಹತ್ತಿತು. ಕೆಲಸದಲ್ಲಿ ಒಬ್ಬರಿಗೊಬ್ಬರು

ಸಹಾಯ ಸಲ್ಲಿಗಳಿಂದ ನಡೆಯಹತ್ತಿದ್ದರಿಂದ ದವಾಖಾನೆಯ ಕೆಲಸವು ಅತ್ಯುತ್ತಮವಾಗಿ ನಡೆಯಹತ್ತಿತು. ಎರಡೂ ನೊಂದ, ಬೆಂದು ಬಾಳಿನ ಕಹಿಯನ್ನುಂಡ ಜೀವಿಗಳು. ಇಬ್ಬರ ಬಾಳೂ ಗೋಳಿನ ಹಾಳು ಬಾಳಾಗಿತ್ತು. ಒಬ್ಬರಿಗೊಬ್ಬರು ಸಮಾಧಾನ ಹೇಳುತ್ತ ತಮ್ಮ ಬಾಳನ್ನು ಸಾಗಿಸುತ್ತಿದ್ದರು.

ಬೆಳಗಿನ ಎಂಟು ಗಂಟೆಯ ಸಮಯ ಕಮಲಳು ದಿನದಂತೆ ಬಂದು ದವಾಖಾನೆ ಸೇರಿದಳು. ತನ್ನ ರೂಮಿಗೆ ಹೋಗಿ ಸ್ಟೇಟಸ್ಕೋಪ ಮತ್ತು ಥರ್ಮಾಮೀಟರ ತೆಗೆದುಕೊಂಡು ಪ್ರತಿಯೊಂದು ರೋಗಿಯನ್ನು ನಿರೀಕ್ಷಿಸುತ್ತ ೩೦ ಕಾಟ ತಿರುಗಿದಳು. ಆದರೆ ಅವಳ ಮನಕ್ಕೆ ಸ್ವಸ್ಥೆಯಿಲ್ಲ, ಶಾಂತಿಯಿಲ್ಲ ಹೀಗೇಕಾಯಿತು ? ಎಂದು ವಿಚಾರ ಮಾಡುತ್ತ ಕೈ ಗಡಿಯಾರ ನೋಡಿದಳು. " ಇನ್ನೂ ಯಾಕೆ ಬರಲಿಲ್ಲ ? ಕುಲಕರ್ಣಿಯವರ ಮೈಯಲ್ಲಿ ಸರಿಯಿಲ್ಲವೇ ಅಥವಾ ಅಪರ ಪತ್ನಿಗೆ ಹೇಗಿದೆ ? ಟೆಂಪ್ರೇಚರ ಏರಿರುವವೋ? ಹ್ಯಾಗೆ ? ಡಾಕ್ಟರರನ್ನಾದರೂ ಕೇಳಲೇ ? " ಎಂದು ಮನಸ್ಸು ತವಕಪಡಹತ್ತಿತು. ಎದೆಯು ಬಡೆದುಕೊಳ್ಳಹತ್ತಿತು. ಡಾಕ್ಟರರನ್ನು ಕೇಳಿದರೆ ' ಇವಳಿಗೇಕೆ ಕು॰ ಕರ್ಣಿಯ ಚಿಂತೆ ? " ಎಂದು ಏನಾದರೂ ತಿಳಿದುಕೊಂಡರೆ ಮುಂದೆ ಗತಿಯೇನು ? ಎಂದು ವಿಚಾರ ಮಾಡುತ್ತ ಗಡಿಯಾರ ನೋಡಿದಳು. ಗಡಿಯಾರದಲ್ಲಿ ೯-೧೫ ಘಂಟೆಯಾಗಿತ್ತು. ಮೋಟಾರ ಹಾರ್ನಿನ ಸಪ್ಪಳವಾಯಿತು. ಡಾಕ್ಟರರೇನಾದರೂ ತಮ್ಮ ಸಂಗಡ ಊರಿಗೆ ಕರೆದುಕೊಂಡು ಹೋಗಿರಬಹುದು. ಈಗ ಮೋಟಾರ ಬಂದಿತು. ಬರಬಹುದೆಂದು ಆಶಿಸಿದಳು

ಕಾರು ನಿಂತಿತು. ನಿತ್ಯದಂತೆ ಡಾಕ್ಟರರು ಕಾರಿನಿಂದಿಳಿದು ಖಡಲ್, ಖಡಲ್ ಸಪ್ಪಳ ಮಾಡುವ ಬೂಟಿನಿಂದ ಮೆಟ್ಟಿಲು ಹತ್ತಿದರು. ಕಮಲಳು ಖಿಡಿಕೆಯಿಂದ ಕುಲಕರ್ಣಿ ಬಂದರೇನು ಎಂದು ನೋಡಹೋದಳು. ಆದರೆ ಡಾಕ್ಟರ ಹಾಗು ಬಾಬುವಿನ ವಿನಃ ಯಾರೂ ಅಲ್ಲಿರಲಿಲ್ಲ. ಮತ್ತಷ್ಟು ಕಮಲಳಿಗೆ ಸಂಕಟವಾಗಹತ್ತಿತು. " ಕುಲಕರ್ಣಿಯು ಬಾರದಿದ್ದರೆ ತನಗೇಕೆ ಹೀಗಾಗಬೇಕು ? ನಾನು ನನ್ನ ಕೆಲಸಕ್ಕೆ ಬರುತ್ತೇನೆ, ಅವರು ತಮ್ಮ ಕೆಲಸಕ್ಕೆ ಬರುತ್ತಾರೆ, ಆದರೆ ಅವರಿಗಾಗಿ ನಾನೇಕೆ ಮರುಗಬೇಕು ? ಪರ ಗಂಡಸರ ಸಲುವಾಗಿ ನನಗೇಕೆ ಚಿಂತೆ ? " ಎಂದು ಸುಮ್ಮನಾದಳು. ಆದರೆ ಮನಸ್ಸು ಮಾತ್ರ ಒಪ್ಪಲಿಲ್ಲ. ಕುಲಕರ್ಣಿಯ ಸಮಾಚಾರ ಡಾಕ್ಟರರಿಂದ

ಕೇಳಿಯೇ ತಿಳಿದುಕೊಳ್ಳಲು ಮನ ತವಕಪಡಹತ್ತಿತು. ಇದರಿಂದ ಮನಸ್ಸಿಗೆ ನೆಮ್ಮದಿ ಉಳಿಯಲಿಲ್ಲ. ರೋಗಿಗಳ ಕೂಡ ಮಾತನಾಡುವಾಗ ಮನವಿಲ್ಲದ ಮಾತುಗಳನ್ನು ಕಂಡು ೫ ನೇ ನಂಬರದ ರೋಗಿಯಾದ ಸುಮಿತ್ರಮ್ಮನವರು "ಯಾಕೆ ? ಸಾಕೆಯುವರೇ ತಮಗೆ ಸ್ವಸ್ಥವಿಲ್ಲೇನು ? ಮುಖವೇಕೆ ಹೀಗಾ-ಗಿದೆ ? " ಎಂದು ಪ್ರಶ್ನಿಸುತ್ತ ತನ್ನ ಮಗುವಿನ ಮೇಲೆ ಹೊದಿಕೆಯನ್ನು ಹೊದ್ದಿಸಿ ಎದ್ದು ಕುಳಿತರು. "ಯಾಕೆ ? ಮುಖ ಹೇಗೆ ಕಾಣಿಸುವದು ?" ಎಂದು ಕಮಲಳು ಸುಮಿತ್ರಮ್ಮನವರನ್ನು ಪ್ರಶ್ನಿಸಿದಳು. ಹಾಗೆಯೇ ಥರ್ಮಾಮೀಟರದಲ್ಲಿಯ ಪಾರಜವು ಎಲ್ಲಿಯವರೆಗೆ ಏರಿದೆ ಎಂಬುದನ್ನು ನೋಡಹತ್ತಿದಳು.

"ಮುಖದಲ್ಲಿ ದಿನದಂತೆ ಉಲ್ಹಾಸವಿಲ್ಲ. ಕೆಲಸದಲ್ಲಿ ತತ್ಪರತೆ ತೋರುವದಿಲ್ಲ" ಅದಕ್ಕೇ ಕೇಳಿದೆ.

"ಹೀಗೋ, ಮೈಯಲ್ಲಿ ಸರಿಯಿಲ್ಲ" ಎಂದು ಹೇಳಿ ಜಾರಿಕೊಂಡಳು.

"ಕುಲಕರ್ಣಿ ಬರದಿದ್ದರೆ ತನಗೇಕೆ ವೇದನೆ ? " ಇದಾವದೂ ತಿಳಿ-ಯದಾಯಿತು. ಹಾಗೇ ವಿಚಾರದಲ್ಲಿ ಮುಳುಗಿ ಕುಲಕರ್ಣಿಯ ಶೋಧದ-ಲ್ಲಿದ್ದ ಮನಸ್ಸು "ಅವರು ಯಾಕೆ ಬರಲಿಲ್ಲ ? ಇದು ತಿಳಿಯದಿದ್ದರೆ ಮನಕ್ಕೆ ನೆಮ್ಮದಿ ಸಿಗದು. ಮತ್ತು ಕೆಲಸವು ಸಾಗದು. ಕೆಲಸವು ಕುಂಠಿತವಾಗಹತ್ತಿ-ರುವದು. ಇನ್ನು ತಡೆಯುವದು ಅಸಾಧ್ಯ, ಡಾಕ್ಟರರನ್ನು ಕೇಳಿಯೇ ತೀರುವೆ" ಎಂದು ಡಾಕ್ಟರರ ಬಳಿ ಹೋದಳು.

ಡಾಕ್ಟರರು ಕೇಸುಗಳು ಇಲ್ಲದ್ದರಿಂದ ಕಾಲು ಮೇಲೆ ಕಾಲು ಹಾಕಿ-ಕೊಂಡು ಸಿಗಾರೇಟು ಸೇದುತ್ತ "ಈಗ ದವಾಖಾನೆಯ ಪರಿಸ್ಥಿತಿ ಸುಧಾರಿ-ಸಿತು ಉತ್ತಮ ಕಂಪೌಂಡರ ಮತ್ತು ಜಾಣ ನರ್ಸ ಸಿಕ್ಕಿದ್ದರಿಂದ ಊರಲ್ಲಿ ಪ್ರಸಿದ್ಧಿ ಹೊಂದಿದೆ. ನನ್ನ ದವಾಖಾನೆಗೆ ಇಗ ಸಾಕಷ್ಟು ಹಣ ಬರಹತ್ತಿದೆ. ಇಬ್ಬರಿಗೂ ಪಗಾರದಲ್ಲಿ ೨೦ ರೂ. ಏರಿಸೋಣ. ಅವರ ಮನಸ್ಸು ಸಂತೋಷ ದಿಂದಿರಲಿ ಆದರೆ ನಾನು ಎಷ್ಟು ಸಂತೋಷದಿಂದ ಇಟ್ಟರೂ ದೇವರು ಅವರು ಸಂತಸದಿಂದಿ ಇರದಂತೆ ಕಂಪೌಂಡರನ ಹೆಂಡತಿಯನ್ನೂ, ನರ್ಸಳ ಗಂಡನನ್ನೂ ಟಿ. ಬಿ ಸ್ಥಿತಿಯಲ್ಲಿ ಇಟ್ಟಿದ್ದಾನೆ. ಅವರ ದೈವ ! ಯಾರೇನು ಮಾಡುವದು ? ಪಾಪ ! ಇಬ್ಬರೂ ತರುಣರು, ಸನ್ಯಾಸಿಯಂತೆ ಜೀವನ

ಸಾಗಿಸಬೇಕಾಗಿದೆ." ಎಂದು ವಿಚಾರದಲ್ಲಿ ಮುಳುಗಿ ಶಿಗಾರೇಟ ಸೇದುತ್ತಿರುವಾಗಲೇ ನರ್ಸಳು ರೂಮು ಪ್ರವೇಶಿಸಿದಳು.

"ಯಾಕೆ ? ಏನು ಕೆಲಸವಿತ್ತು ? ನಿಮ್ಮನಿಯರಿಗೆ ಸರಿಯೇ ?" ಎಂದು ಕಮಲಳನ್ನು ಡಾಕ್ಟರರು ಪ್ರಶ್ನಿಸಿದರು. ಕಮಲಳಿಗೆ ಎಲ್ಲವೂ ಸರಿ, ಎಲ್ಲವೂ ಒಳಿತು. ಆದರೆ ಅವಳಿಗೆ ಬೇಕಾದದ್ದು ಕುಲಕರ್ಣಿ ಪ್ರಶ್ನೆ. ಅದಕ್ಕೆ ಅವಳು ಮಾತನ್ನು ಮುಗಿಸುವದಕ್ಕಾಗಿ "ಎಲ್ಲವೂ ಸರಿ" ಎಂದು ಉಸುರಿದಳು.

"ಈ ದಿವಸ ನೀವೊಬ್ಬರೇ ಕೆಲಸ ಸಾಗಿಸಬೇಕಾಗಿದೆ"

"ಯಾಕೆ ? ಇನ್ನೂ ಕುಲಕರ್ಣಿ ಬರಲಿಲ್ಲ !" ಎಂದು ಏನೂ ಅರಿಯದವಳಂತೆ ಸಹಜ ಡಾಕ್ಟರರನ್ನು ಕೇಳಿದಳು.

"ಏನೋ, ಹೆಂಡತಿಗೆ ಕಾಹಿಲೆ ಜಾಸ್ತಂತೆ ಹುಕ್ಕೇರಿ ರೋಡಿಗೆ ಅವರ ಅಣ್ಣನ ಬಳಿ ಕಳಿಸಲು ಹೋಗಿದ್ದಾರೆ."

"ಯಾವಾಗ ಬರುವರು ?"

"ಸಂಜೆಗೆ ಅಲ್ಲಿಯವರೆಗೆ ನೀವೊಬ್ಬರೇ ಸಾಗಿಸಿಕೊಂಡು ಹೋಗಿರಿ ನಿಮಗೆ ಪೇಶಂಟುಗಳು ಗರ್ದಿಯಾದಾಗ ನನ್ನನ್ನು ಕರೆಯಿರಿ. ನಾನೂ ಬರುವೆ." ಎಂದು ಡಾಕ್ಟರರು ಹೇಳಿ ಸಿಗಾರೇಟ ಸೇದಹತ್ತಿದರು.

ಕಮಲಳು ಭಾರವಾದ ಕೈಕಾಲುಗಳನ್ನು ಎತ್ತಿಕೊಂಡು "ಇನ್ನು ನಾನು ಈ ಹಾಳು ದವಾಖಾನೆಯಲ್ಲಿ ಸಂಜೆಯವರೆಗೂ ಹೇಗೆ ತೆಗೆಯಲಿ ? ಅವರಿಲ್ಲದಿದ್ದರೆ ಕ್ಷಣವೊಂದು ಯುಗವಾಗಿ ಪರಿಣಮಿಸುವದು. ಅವರೇನು ನಮ್ಮ ಜಾತಿಯವರಲ್ಲ. ಗೋತ್ರದವರಲ್ಲ ಅವರಲ್ಲಿ ಯಾಕೆ ಇಷ್ಟು ಪ್ರೀತಿ ಬೆಳೆಯಬೇಕು ? ಇದೊಂದು ತಿಳಿಯದಲ್ಲ ? ತಿಳಿಯುವದೇತರದು ? ಅವರ ಮಗುವಿನಂಥ ಮನಸ್ಸು ನನ್ನನ್ನು ಸೆಳೆದಿದೆ. ಪ್ರೀತಿಗೆ ಜಾತಿ ಧರ್ಮಗಳಿಲ್ಲ. ಅದು ಕುರುಡು. ಅದಕ್ಕಾಗಿ ಇಂಗ್ಲೀಷದಲ್ಲಿ ( Love is blind ) ಅಂದರೆ ಪ್ರೇಮ (ಪ್ರೀತಿ) ಕುರುಡು ಅಂತಾ ಹೇಳಿದ್ದಾರೆ. ಹೋಗುವಾಗ ನನಗೇಕೆ ಹೇಳಲಿಲ್ಲ ? ನನಗೆ ಹೇಳದೆ ಹೋದರು. ನಾನು ಬಿಡುತ್ತಿರಲಿಲ್ಲವೇ ?" ಎಂಬ ವಿಚಾರದಲ್ಲಿ ಮಗ್ನಳಾಗಿ ಔಷಧದ ಬಾಟಲಿಗಳೊಂದಿಗೆ ಒಂದು ಘಂಟೆಗೆ ಮನೆ ಸೇರಿದಳು.

ಮನೆಗೆ ಹೋಗಿ ಗಂಡನಿಗೆ ಔಷಧ ಕೊಟ್ಟು ಅಡಿಗೆ ಮಾಡಿ ಊಟಕ್ಕೆ ಹಾಕಿ ತಾನೂ ಊಟಕ್ಕೆ ಕುಳಿತಳು. ಎರಡು ತುತ್ತು ಅನ್ನ ಅವಳ ಗಂಟಲಲ್ಲಿ ಇಳಿಯಲಿಲ್ಲ. "ಎಂಥ ಹುಚ್ಚು ಮನಸ್ಸು ಪರ ಗಂಡಸರ ವಿಷಯದಲ್ಲಿ ನಾನೇಕೆ ಇಷ್ಟು ವ್ಯಥೆ ಪಡಬೇಕು? ಅವರು ಪರ ಗಂಡಸರಲ್ಲ. ನನ್ನ ಮನಸ್ಸಿನ ರಾಜ. ಅಂದರೆ ನಾನು ಅವರ ರಾಣಿಯಾದೆನಲ್ಲಾ. ಇದರಲ್ಲೇನು ಸಂಶಯ? ಈಗ ಒಬ್ಬರ ರಾಣಿಯಾಗಿರುವಿನಲ್ಲಾ? ಆಗಿದ್ದೆ. ಆದರೆ ಅವರು ವಿಧಿ ವಶದಿಂದ ನಿರ್ಜೀವಿಗಳಾದರು. ನನ್ನದಾದರೇನು ತಪ್ಪು? ಅವರೇ ಗಟ್ಟಿಗರಾಗಿದ್ದರೆ ನಾನೇಕೆ ಪರ ಗಂಡಸರನ್ನು ಹೃದಯ ಮಂದಿರದಲ್ಲಿ ಪೂಜಿಸುವ ಪ್ರಸಂಗ ಬರುತ್ತಿತ್ತು?" ಎಂಬ ಏನೇನೋ ವಿಚಾರದಲ್ಲಿ ಅನ್ನ ಗಂಟಲಲ್ಲಿ ಇಳಿಯಲಿಲ್ಲ. ದಸರೆಯ ನಿಮಿತ್ತ ತಗೆಯಿಸಿದ ಫೋಟೋವನ್ನು ನೋಡಿ ಅದರಲ್ಲಿಯ ಕುಲಕರ್ಣಿಯ ಭಾವ ಪಟವನ್ನು ಮುದ್ದಿಸಿದಳು. ಮುದ್ದಿಸಿ ತನಗೆ ತಾನೇ ನಾಚಿದಳು. ಅಷ್ಟರಲ್ಲಿ ಮತ್ತೆ ದವಾಖಾನೆಯ ವೇಳೆಯಾಯಿತು. ಬಿಳಿಯ ಪತ್ತಲವುಟ್ಟು ಬಿಳಿಯ ಚೋಳಿ ಪದ್ಧತಿ ಝಂಪರ ತೊಟ್ಟು ದವಾಖಾನೆಯ ಹಾದಿ ಹಿಡಿದಳು. ದಾರಿಯುದ್ದಕ್ಕೂ ಕುಲಕರ್ಣಿಯ ಚಿಂತೆಯೇ ಚಿಂತೆ. "ತನಗೆ ಯಾರ ಮೇಲೂ ಪ್ರೇಮವಿಲ್ಲ. ಸುಖ ಸಿಗಬೇಕಾದರೆ ಕುಲಕರ್ಣಿಯ ಹೊರತು ಬೇರೊಬ್ಬರಿಂದ ಶಕ್ಯವಿಲ್ಲಾ. ಯಾವಾಗ ಬರುವರೋ ದೇವರೇ ಬಲ್ಲ?" ಎಂದು ಭಾರವಾದ ಕಾಲುಗಳನ್ನು ಮುಂದೆ ನೂಕುತ್ತ ದವಾಖಾನೆಯ ಕಟ್ಟೆ ಹತ್ತಿದಳು.

ಕುಲಕರ್ಣಿಯು ತೆಪ್ಪಗೆ ಮುಖ ಮಾಡಿಕೊಂಡು ಕುಳಿತಿದ್ದನು. ದಿಕ್ಕೇ ತಪ್ಪಿತ್ತು. "ಇನ್ನು ಕೆಲ ದಿನದಲ್ಲಿ ಹೆಂಡತಿಯಂತೂ ಕೈ ಬಿಡುವಳು. ಇನ್ನು ನನ್ನ ಭಾವೀ ಭವಿಷತ್ತನ್ನು ಹೇಗೆ ರಚಿಸಿಕೊಳ್ಳಬೇಕು. ನನಗೆ ಅನುರೂಪಳಾದ ಕನ್ಯೆಯಾರಿರುವಳು? ನನ್ನ ಮನಸ್ಸು ವಿಚಿತ್ರ. ನನ್ನಂತೆ ನಡೆಯುವವರು ಯಾರಿದ್ದಾರೆ? ನನಗೂ ಸಣ್ಣ ವಯಸ್ಸು. ಇತರರಂತೆ ವೇಶ್ಯೆಯ ಗೃಹ ಪ್ರವೇಶಿಸುವದು ಒಪ್ಪದು ಈಗಂತೂ ಕಮಲಳನ್ನು ಬಿಟ್ಟು ಇರುವದು ಆಗದು. ಅದಕ್ಕಾಗಿ ಸಂಜೆಗೆ ಬರುವದಾಗಿ ಹೇಳಿದ ನಾನು ಮಧ್ಯಾನ್ಹದ ವರೆಗೆ ಬಿಟ್ಟು ಇರುವದು ಆಗಲಿಲ್ಲ. ಪಾಪ!

ಪರ ಸ್ತ್ರೀ, ಲಗ್ನವಾದವಳು. ಒಬ್ಬನ ಹೆಂಡತಿ. ಅವಳು ನನ್ನನ್ನು ಒಲಿಸಲು ಒಪ್ಪಬಹುದೇ? ಒಪ್ಪಿದರೂ ಒಪ್ಪಬಹುದು. ಯಾಕಂದರೆ ಅವಳ ಬಾಳಿನಲ್ಲಿಯೂ ಅವಳಿಗೆ ಸುಖವಿಲ್ಲ. ದುಃಖ ಜೀವಿಗಳು ಒಬ್ಬರನ್ನೊಬ್ಬರು ಆಶ್ರಯಿಸುವದು ನಡದೇ ಇರುತ್ತದೆ. ಅಂದ ಮೇಲೆ ಅವಳನ್ನೇಕೆ ನಾನು ಪ್ರೀತಿಸಬಾರದು? ನಿಜವಾಗಿಯೂ ಅವಳಂಥ ಗುಣವಂತಿ, ದೇವ ಭಕ್ತಳನ್ನು ನಾ ಕಾಣೆ. ನನ್ನ ಮೇಲೆಯೂ ಈಗಂತೂ ಅದೇ ಭಕ್ತಿಯಿಂದ ನಡೆದಿದ್ದಾಳೆ. ಮುಂದೆ ಹೇಗದೆಯೋ ನಾ ಕಾಣೆ. ಒಮ್ಮೆ ಅವಳನ್ನು ಕೇಳಿಯೇ ತೀರುವೆ. ಒಪ್ಪಲಿ ಅಥವಾ ಬಿಡಲಿ ನಾನು ಕೇಳಬಹುದು. ಆದರೆ ನನ್ನ ಇಚ್ಛೆ ಮುರಿಯದ್ದಕ್ಕೆ ಒಪ್ಪಿಕೊಂಡರೆ ಮಾತ್ರ ಉಪಯೋಗವಿಲ್ಲಾ. ತನ್ನ ಮನಸಾ ನನ್ನನ್ನೂ ಪ್ರೀತಿಸಿದರೆ ಮಾತ್ರ ನಾನು ಅವಳನ್ನು ಪ್ರೀತಿಸುವೆ. ನನಗಾಗಿ ಅವಳು ತನ್ನ ಸರ್ವಸ್ವವನ್ನೂ ತ್ಯಾಗ ಮಾಡಲು ಸಿದ್ಧಳಾಗಿರಬೇಕಲ್ಲಾ? ಅವಳೇಕೆ ಹಾಗೆ ತ್ಯಾಗ ಮಾಡಿಯಾಳು? ತನ್ನ ಸಂಸಾರದಲ್ಲಿ ಸುಖವಾಗಿರುವಳಲ್ಲಾ?" ಹೀಗೆ ಏನೋನೋ ವಿಚಾರಗಳಲ್ಲಿ ಕುಳಿತಿದ್ದನು ಮೋಟಾರದಲ್ಲಿಯ ಮಲಿನವಾದ ಬಟ್ಟೆಗಳನ್ನು ಸಹ ಬಿಚ್ಚಿರಲಿಲ್ಲ. ಸೀಗಾರೇಟ ಹೊತ್ತಿಸುತ್ತ "ಮುಂದೇನು ಗತಿ?" ಎಂಬ ವಿಚಾರದಲ್ಲಿದ್ದನು. ಊಟವೂ ಆಗಿದ್ದಿಲ್ಲ. ಹೊಟ್ಟೆಯಲ್ಲಿ ಅನ್ನವಿಲ್ಲದ್ದರಿಂದ ಕೈಕಾಲುಗಳಲ್ಲಿ ತ್ರಾಣವಿದ್ದಿಲ್ಲ. ಬರುವಾಗ ಹೆಂಡತಿಯು "ಮರೆಯದಿರಿರಿ ಈ ಬಡಿವಿಯುನ್ನು" ಎಂದು ಉಸುರಿದ ಉಸಿರು ಕಣ್ಣು ಮುಂದೆ ಕಟ್ಟಿತ್ತು.

ಕಮಲಳು ಕಟ್ಟೆಯನ್ನು ಹತ್ತುತ್ತ ಇದುರಿನ ಖುರ್ಚಿಯ ಮೇಲೆ ಕುಲಕರ್ಣಿ ಕುಳಿತಿದ್ದನ್ನು ಕಂಡು ಆನಂದಭರಿತಳಾಗಿ ಏನೂ ತೋಚದೆ "ಯಾಕೆ, ನನಗೆ ಊರಿಗೆ ಹೋಗುವಾಗ ಹೇಳಬಾರದೇ? ಬೆಳಿಗ್ಗೆ ದಾರಿ ಕಾಯ್ದು, ಕಾಯ್ದು ಬೇಸತ್ತೆ. ಯಾರ ಮನಸ್ಸು ಹೇಗೆ ಇರುವದು ಇದೂ ನಿಮಗೆ ತೋಚದೆ? ವಿನಾಕಾರಣ ಗಾಳಿಯಂತೆ ಹೊಯ್ದಾಡಿ ಮನಸ್ಸು? ಗಾಳಿಯ ಹಣ್ಣು ತಿಂದಿತು." ಎಂದು ಸಿಡುಕಿನಲ್ಲಿ ನುಡಿದಳು.

"ಅವಳನ್ನು ಅವರ ಅಣ್ಣನ ಬಳಿ ಕಳಿಸಿದೆ. ತಾಯಿಯವರಿಗೂ ಅವಳ ಉಪಚಾರ ಮಾಡುವದು ಆಗಲಿಲ್ಲಿ. ಮುಪ್ಪಿನಲ್ಲಿ ತ್ರಾಸವೇ

ಕೆಂದು ಮತ್ತು ಹವೆ ಉತ್ತಮವೆಂದು ಕಳಿಸಿದೆನು. ಮತ್ತು ಡಾಕ್ಟರರಿಗೆ ತೋರಿಸಿದೆ. ಇನ್ನೇನು ಬಹಳ ದಿವಸ ಬದಕುವ ಆಶೆ ಇಲ್ಲವೆಂದು ಹೇಳಿ ದ್ದಾರೆ. ಆದರೂ ಜೀವವಿರುವವರೆಗೆ ಮಾಡಬೇಕಲ್ಲಾ ?" ಎಲ್ಲವನ್ನೂ ಕೇಳುತ್ತ ಕಮಲಳು ಸ್ಥಬ್ದ ನಿಂತಳು.

"ಸ್ನಾನವಾಗಿಲ್ಲವೇ ? ಮೈಯೆಲ್ಲಾ ಧೂಳು ಏಳಿರಿ. ಇಲ್ಲಿಯೇ ನೀರು ಕಾಯಿಸಿ ಕೊಡುವೆ ಸ್ನಾನ ಮಾಡಿರಿ. ಅಷ್ಟರಲ್ಲಿ ಮನೆಗೆ ಹೋಗಿ ಡಬ್ಬಿ ತರುವೆ. ಊಟ ಮಾಡಿರಿ. ಮುಖವೆಲ್ಲಾ ಬಾಡಿದೆ. ಅರಿವೆಗಳು ಕೊಳೆಯಾಗಿವೆ. ನೋಡಿ, ಆಗಲೇ ದವಾಖಾನೆಯ ವೇಳೆಯಾಯಿತು." ಎಂದು ಕಮಲಳು ಉಸುರಿದಳು.

ಕುಲಕರ್ಣಿಯು ಕಮಲಳ ಇಚ್ಛೆಯಂತೆ ಸ್ನಾನ ಮುಗಿಸುವೆ ಅಂದನು. ಅಷ್ಟರಲ್ಲಿ ಬರುವಾಗ ಕೈಕಾಲಗಳೇ ಏಳ್ದಿರಲಿಲ್ಲ. ಆದರೆ ಈಗ ಅವಳಿಗೆ ವಾಯು ವೇಗದಿಂದ ಹೋಗುವಷ್ಟು ಸ್ಫೂರ್ತಿ ಬಂದಿದ್ದಿತು. ತನಗೆ ಕೈಕಾಲದಲ್ಲಿ ಈ ಬಗೆಯ ಶಕ್ತಿ ಹೇಗೆ ಬಂದಿತೋ ? ದೇವರೇ ಬಲ್ಲ. ಮನದಲ್ಲಿ ಉತ್ಸಾಹವು ತುಂಬಿತು. ಡಬ್ಬಿ ತೆಗೆದುಕೊಂಡು ಬಂದಳು. ಕುಲಕರ್ಣಿಯು ಇನ್ನೂ ಸ್ನಾನ ಮುಗಿಸಿರಲಿಲ್ಲ. ಅದನ್ನು ಕಂಡು "ಯಾಕೆ ? ಇನ್ನೂ ಸ್ನಾನ ಮಾಡಲಿಲ್ಲವೇ ?"

"ಇಲ್ಲ ಇವನ್ನೊಂದು ಶಿಗಾರೇಟ ಸೇದಬೇಕಂದು ಕುಳಿತೆ ಅಷ್ಟರಲ್ಲಿ ನೀವು ಬಂದಿರಿ" ಎಂದು ಶಿಗಾರೇಟಿಗೆ ಬೆಂಕಿ ಹಚ್ಚಹತ್ತಿದನು.

ಕಮಲೆಯು ಕುಲಕರ್ಣಿಯ ಚೀಲದಲ್ಲಿಯ ಧೋತರ ಹೊರಗೆ ತೆಗೆದು ನೀರಿಗೆ ಹಾಕಿದಳು, ಟಾವೇಲ ಇಟ್ಟಳು ಸ್ನಾನಕ್ಕೂ ಹಾಕಿದಳು. ತಾನು ಸ್ನಾನಕ್ಕೆ ಹಾಕಿದ್ದು ಅವಳಿಗೇ ತಿಳಿಯಲಿಲ್ಲ. ಉದ್ವೇಗದಲ್ಲಿ ಎಲ್ಲವೂ ಆಯಿತು. ಊಟಕ್ಕೆ ಬಡಿಸಿದಳು. ಊಟವೂ ಮುಗಿಯಿತು. ಕುಲಕರ್ಣಿಯ ನೊಂದ ಮನಕ್ಕೆ ಶಾಂತಿ ದೊರೆಯಿತು.

೩

ಡಾಕ್ಟರ ರಾಮರಾಯರ ಬಳಿ ಹರ್ನಿಯಾ ಕೇಸೊಂದು ಬಂದಿತು ಹರ್ನಿಯಾದ ಆಪರೇಶನ್ ಕೆಲಸಕ್ಕೆ ಸಾಕಷ್ಟು ಸಾಹಿತ್ಯಗಳು ತಮ್ಮಲ್ಲಿಲ್ಲ

ವೆಂದು ಹುಕ್ಕೇರಿ ರೋಡಿಗೆ ಪೇಶಂಟು ಕರೆದುಕೊಂಡು ಹೋಗಲು ಕುಲ ಕರ್ಣಿಗೆ ತಿಳಿಸಿದರು. ಸಂಜೆಯ ಐದು ಘಂಟೆಯ ಸಮಯ ಕುಲಕರ್ಣಿಯೂ ಅನಾಯಾಸವಾಗಿ ಹೆಂಡತಿಯ ದರ್ಶನವಾಗುವದೆಂದು ಬಗೆದು ಮಗುವಿನ ಮುದ್ದು ಮುಖ ನೋಡಬೇಕು. ಹೆಂಡತಿಯಿಂದಲೂ ಪ್ರಕೃತಿ ಆರಾಮ ವಾಗಿದೆ ಎಂದು ಪತ್ರವೂ ಬಂದಿದೆ. ಅದಕ್ಕಾಗಿ ಒಮ್ಮೆ ದರ್ಶನವು ಗಾಡಿಯ ಖರ್ಚಿಲ್ಲದೆ ಸಿಗುವದೆಂದು ಹುಕ್ಕೇರಿ ರೋಡಿಗೆ ಹೋಗಲು ಸಂತೋಷದಿಂದ ಒಪ್ಪಿಕೊಂಡನು.

ಸಂಜೆಯ ಪ್ರಶಾಂತ ವಾತಾವರಣದಲ್ಲಿ ಕಾರಿನ ಮುಂಭಾಗದಲ್ಲಿ ಕುಳಿತು ನಡೆದರು. "ಮನೆಗೆ ಹೋಗುವದರಲ್ಲಿ ಆನಂದದಿಂದ ತನ್ನನ್ನು ಮಡದಿ ಇದಿರುಗೊಳ್ಳುವಳು. ಪ್ರಕೃತಿ ಆರಾಮವಾದ ಬಗ್ಗೆ ಸಂತೋಷವ್ಯಕ್ತ ಪಡಿಸುವಳು. ಎರಡು ವರುಷದಿಂದ ಬರದಲ್ಲಿಯ ಹೆಣದಂತಿದ್ದ ಮುಖವು ಇಂದು ತುಂಬಿದ ಕಾಯದವಳಾಗಿದ್ದಾಳೆ. ತನ್ನ ಅಣ್ಣನು ಮಾಡಿದ ಔಷಧೋಪಚಾರದ ವರ್ಣನೆಯನ್ನಂತೂ ಕೇಳಿಯೇ ಬೇಸರಿಯಬಹುದು. ಏನಿಲ್ಲದೆ ತವರನ್ನು ಹೊಗಳುವ ಹೆಣ್ಣು ಜಾತಿ ಇಷ್ಟು ಮಾಡಿದ ಮೇಲಂತೂ ಕೇಳುವದೇ ?" ಹೀಗೆ ಅನೇಕ ವಿಚಾರದ ಮನೋರಾಜ್ಯದಲ್ಲಿ ಕುಲಕರ್ಣಿ ತಲ್ಲೀನನಾಗಿದ್ದನು. ಅಷ್ಟರಲ್ಲಿ ದವಾಖಾನೆಯು ಬಂದಿತು.

ಕುಲಕರ್ಣಿಯು ಪೇಶಂಟನ್ನು ಸ್ಪೇಶಲ ರೂಮು ಸೇರಿಸಿ ಡಾಕ್ಟರರನ್ನು ಭೆಟ್ಟಿಯಾಗಿ ತಮ್ಮ ಡಾಕ್ಟರ ರಿಪೋರ್ಟ ಮುಟ್ಟಿಸಿದನು. ಡಾಕ್ಟರರು ರಿಪೋರ್ಟ ನೋಡಿ ರೋಗಿಯನ್ನು ಪರೀಕ್ಷಿಸಿ, "ನಿಮ್ಮ ಡಾಕ್ಟರರ ಅಭಿ ಪ್ರಾಯ ಸರಿಯಿದೆ. ಈಗಲೇ ಆಪರೇಶನ್ ಮಾಡಬೇಕಾಗುವದು. ಎಂದು ಹೇಳಿ ರೋಗಿಯನ್ನು ಆಪರೇಶನ್ ರೂಮಿಗೆ ಸೇರಿಸಿದರು. ಆಗಲೇ ತಾಸಿ ನಲ್ಲಿ ಆಪರೇಶನ್ ಮುಗಿಯಿತು. "ರೋಗಿಗೆ ಏನೂ ಆಗುವದಿಲ್ಲ. ಕಾಳಜಿ ಮಾಡಬೇಡಿರಿ. ನೀವು ಹೋಗಿ ವಿಶ್ರಮಿಸಿರಿ" ಎಂದು ಡಾಕ್ಟರರು ಹೇಳಿ ದರು. ಕುಲಕರ್ಣಿಯು ಕಾರು ತೆಗೆದುಕೊಂಡು ಬೀಗರ ಮನೆಗೆ ಹೋದರು. ಬಾಬು ಕಾರು ಬಾಗಿಲಲ್ಲಿ ನಿಲ್ಲಿಸಿ ಕುಲಕರ್ಣಿಯವರಿಗೆ ತಾನು ಖಾನಾವಳಿ ಯಲ್ಲಿ ಇಳಿದುಕೊಳ್ಳುವದಾಗಿ ಹೇಳಿ ಹೋದನು.

ಬಾಗಿಲು ಹಾಕಿತ್ತು. ಒಳಗೆ ದೀಪ ಉರಿಯುತ್ತಿತ್ತು. ಮನೆಯಲ್ಲಿಯೂ ಯಾರ ಸುಳುವೂ ಇರಲಿಲ್ಲ. "ಶೀಲೆ, ಶೀಲೆ" ಎಂದು ಕರಿಚಿದರು. ಅಷ್ಟರಲ್ಲಿ

ಶೀಲೆಯ ಅಣ್ಣ ಕೃಷ್ಣ ಒಂದು ಬಾಗಿಲು ತೆಗೆದನು. ಮನೆಯಲ್ಲಿ ಯಾರೂ ಕಾಣಲಿಲ್ಲ. ಇದುರಿಗೆ ಮಗಳು ಮಲಗಿದ್ದಳು. ಕೈಯಲ್ಲಿಯ ಕೈಚೀಲವನ್ನು ಕೃಷ್ಣ ತೆಗೆದುಕೊಂಡನು.

" ಶೀಲೆಯು ಎಲ್ಲಿ ? "

" ನಿನ್ನೆ ಸಾಂಗ್ಲಿಗೆ ಹೋಗಿದ್ದಾಳೆ. ಚಿಕ್ಕಮ್ಮ ಬಂದಿದ್ದರು. ಹವೆಯು ಬದಲಾಗಲಿ ನಾಲ್ಕು ದಿನ ಊರು ನೋಡಿದಂತಾಗುವದು. ಅಂತಾ ಕರೆದು ಕೊಂಡು ಹೋದರು ಎಂದು ಕೈಕಾಲಿಗೆ ನೀರು ತಂದು ಇಡುತ್ತ ಪೆಚ್ಚು ಮುಖ ಮಾಡಿಕೊಂಡು ಹೇಳಿದನು.

" ಮಗುವಿನ ಬಿಟ್ಟು ಹೋದಳೇ ? "

" ತಾನೇ ತಿರುಗಾಡಲು ಆಗದವಳು. ಮಗುವನ್ನು ಹೊತ್ತುಕೊಂಡು ತಿರುಗುವದೆಂದರೆ ತ್ರಾಸ. ಮತ್ತು ಆಯಿಯ ಬಳಿ ಪುಷ್ಟ ಇರುವಳು. ಈಗ ೪-೫ ತಿಂಗಳಿಂದ ಆಯಿಯ ಬಳಿಯಲ್ಲಿಯೇ ಇದ್ದಾಳೆ. ಇಷ್ಟೋತನಕ ಆಟ ಮಾಡಿಕೊಂಡಿದ್ದಳು. ಇದೇ ಈಗ ಮಲಗಿದ್ದಾಳೆ. " ಎಂದು ಒಂದೇ ಉಸುರಿನಲ್ಲಿ ಹೇಳಿ ಕಾಲುವರಿಸಲು ಟಾವೆಲು ತಂದು ಕೊಟ್ಟನು.

ಅಷ್ಟರಲ್ಲಿ ಆಯಿಯವರು ಬಂದರು. ಅವರಿಗೂ ಕುಲಕರ್ಣಿಯ ಅಕಸ್ಮಿಕ ಆಗಮನವು ವಿಚಿತ್ರವೆನಿಸಿತು. " ಇದೇನು ಗ್ರಹಚಾರ ನಾನೇಕೆ ಕಳಿಸಿದೆ ? " ಎಂಬ ಪ್ರಶ್ನವು ಅವರ ಮುಖದಲ್ಲಿ ತೇಲುತ್ತಿತ್ತು. ಹಾಗೂ ಹೀಗೂ ಅಡಿಗೆಯ ಮನೆ ಸೇರಿ ಬೇಗನೆ ಚಹ ಮಾಡಿದರು. ಕುಲಕರ್ಣಿ ಗುರುವಾರವಿದ್ದದ್ದರಿಂದ ಚಹ ಫರಾಳ ಮುಗಿಸಿದನು. ಆವನಿಗೆ ಉಂಡಿ, ಅವಲಕ್ಕಿಗಳು ಬೇಡವಾದವು. ದೇವರಿಲ್ಲದ ಗುಡಿಯಂತೆ ಅವನ ಮನಸ್ಸಾಯಿತು. ಯಾರ ಕೂಡ ಮಾತಾಡಲೂ ಮನಸ್ಸಿಲ್ಲ. ಮನಸ್ಸಿಲ್ಲದ ಮನಸ್ಸಿನಿಂದ ಕೃಷ್ಣನ ಕೂಡ ಎರಡು ಮಾತಾಡಿದನು ಭಾರವಾದ ತಲೆಗೆ ಶಾಂತಿ ಬೇಕಾಗಿತ್ತು. ನನಗೆ ನಿದ್ದೆ ಬಂದಿದೆ, ನಾನು ಮಲಗುವೆ " ಯೆಂದು ಹೇಳಿ ಹೊದಿಕೆಯನ್ನು ಹೊದ್ದುಕೊಂಡನು.

" ಎಂಥ ಧೈರ್ಯದವಳು ! ಮಗುವನ್ನು ಬಿಟ್ಟು ಪ್ರವಾಸ ! ಊರು ನೋಡಲು ? ಎಂಥ ಕರುಳು ! ಜಗತ್ತೇ ' ತಾಯಿಯ ಕರುಳೇ ಕರುಳು ' ಎಂದು ಕಿರುಚುವಾಗ ಇವಳದೆಂಥ ಕರುಳು ? ಇವಳಿಗೆ ಕರುಳಿದ್ದರೆ ಮಗು

ವನ್ನು ಬಿಟ್ಟು ಹೋಗುತ್ತಿದ್ದಳೇ ? ತನ್ನ ಹೊಟ್ಟೆಯ ಕರುಳನ್ನೇ ಬಿಟ್ಟು ತನ್ನ ಆರಾಮಿಗಾಗಿ ತಿರುಗುವವಳು ! ನಾಳೆ ಆಕಸ್ಮಿಕ ನನಗೇ ಏನಾದರೂ ನನ್ನನ್ನೇನು ನೋಡುವರು ? ನಾನು ಮೋಸ ಹೋದೆ. ಇಂಥ ನಿಷ್ಕರುಣ ಹೆಣ್ಣಿಗೆ ಬಲೆ ಬಿದ್ದು ನನ್ನ ಜೀವನವನ್ನೇ ಹಾಳು ಮಾಡಿಕೊಂಡೆ ಮೇಲೆ 'ದೇವರು ದೇವರು' ಅನ್ನುವರು ಜಪ ತಪ ಮಾಡುವರು. ಪತಿಯೇ ದೇವರೆಂದು ಆಚಾರ ಹರಿಯುವದು, ಸಂಜೆಯತನಕ ಆತನ ಮನದ ಇಚ್ಛೆಯ ವಿರುದ್ಧ ನಡೆಯುವದು ಇದು ಇವರ ಲಕ್ಷಣವಲ್ಲವೇ ?

ಸಾಗಲಿ ನೌಕೆಯು ದಂಡೆಗೆ ಬಂದಿದೆ ಇನ್ನು ಬಾಯಿಂದ ಆಡಿ ಕೆಡ ಕೇಕೆ ? ಬೇಕಾದರೆ ಮುಂಬೈ ನೋಡಲಿ. ನಾನೇ ಒಮ್ಮೆ ಮನದಿಂದ ಬಿಟ್ಟಂ ರಾಯಿತು. ನನಗೆ ಚಿಂತೆಯೇತರದು ? ಮಗುವಿದೆಯಲ್ಲಾ ? ಅದೆ ಅದನ್ನು ಅವರ ಆಯಿ ಸಂರಕ್ಷಿಸುವರು. ಇಲ್ಲವೆ ಅದರ ನಸೀಬದಂತೆ ಆಗಲಿ. ನನಗೆ ಹೇಳದೆ ಕೇಳದೆ ಪ್ರಯಾಣ ಬೆಳೆಸಿದಳಲ್ಲಾ ? ಇನ್ನು ಸಾಕು ಇವಳ ಸಹ ವಾಸ." ಏನೇನೋ ಇನ್ನೂ ಯೋಚಿಸುತ್ತಲೆ ತಲೆ ಕಾಯ್ದಿತು. ಅದರಲ್ಲೇ ನಿದ್ರೆ ಹತ್ತಿತು.

ಬೆಳಗಾಯಿತು. ಕುಲಕರ್ಣಿ ಎದ್ದಾಗ ಮಗು ಪುಷ್ಪ ಎದ್ದಿದ್ದಳು. ನೇರವಾಗಿ ಹೆರಳು ಹಾಕಿಸಿಕೊಂಡು ಪುಟ್ಟ ಹೆಜ್ಜೆಗಳನ್ನಿಡುತ್ತ ಇದುರಿಗೆ ಬಂದಳು. ಕುಲಕರ್ಣಿಗೆ ತಾನು ಅರಿಯದಂತೆಯೇ ಅವನ ಕೈಗಳು ಮುಂದು ಮಾಡಿದವು. ಮಗು ಕುಲಕರ್ಣಿಯ ತೊಡೆಯನ್ನು ಆಶ್ರಯಿ ಸಿತು. ಮುದ್ದಾಡಿದನು ಅಷ್ಟರಲ್ಲಿ ಕೃಷ್ಣನು "ಚಹಾ, ಆಗಿದೆ" ಎಂದು ಮುಖ ತೊಳೆಯಲು ನೀರು ಇಟ್ಟನು. ಮುಖಮಾರ್ಜನ ಮುಗಿಸಿ "ನಾನು ಊರಿಗೆ ಹೊರಡುವೆನೆಂದು" ಪ್ರಸ್ತಾಪ ತೆಗೆದನು. ಒಳಗಿಂದ ಶೀಲೆಯ ಆಯಿಯು "ಅರ್ಜೆಂಟ ವಾಯರ ಕೊಟ್ಟಿದೆ ಮಧ್ಯಾನ್ಹಕ್ಕೆ ಬರುವಳು ತಡೆಯಿರಿ" ಎಂದು ಉಸುರಿದರು.

"ಬೇಡಾ, ಬಂದಾಗ ಬರಲಿ. ಸುಖದಿಂದ ಇದ್ದರೆ ಸಾಕು." ಎಂದು ಉಪಚಾರಕ್ಕೆ ಮಾತು ಮುಗಿಸಿ ಮಗುವನ್ನು ಕೆಳಗೆ ಇಳಿಸಿ ಕೈ ಚೀಲ ಕೈಯಲ್ಲಿ ತೆಗೆದುಕೊಂಡು ಹೊರಬಂದೆನು. ಇದನ್ನು ಕಂಡು ಕೃಷ್ಣನು ಭಾವನನ್ನು ಕಳಿಸಲು ದವಾಖಾನೆಯ ವರೆಗೆ ಬಂದನು.

“ ಕೃಷ್ಣಾ, ಇನ್ನು ಮುಂದೆ ನನ್ನವಳನ್ನು ಯಾವ ಊರಿಗೂ ನಾನು ಹೇಳದೆ ಕಳಿಸಬೇಡ. ”

“ ಇಲ್ಲ. ಬಹಳೇ ಬೇಜಾರ ಬಂದಿದೆಯೆಂದು ಚಡಪಡಿಸಹತ್ತಿದಳು. ಕಾಹಿಲೆಯಿಂದ ಬಳಲಿದ್ದಳು. ನಾಲ್ಕು ದಿವಸ ಹವೆಯ ಬದಲಾವಣೆಗೆಂದು ಕಳಿಸಿದ್ದೆ. ಆವರೆ ರಾತ್ರಿ ನೀವು ಬಂದ ಕೂಡಲೇ ವಾಯರ ಕೊಟ್ಟಿರುವೆನು. ಎರಡರ ಗಾಡಿಗೆ ಬರಬಹುದು. ನಿಂತು ಭೆಟ್ಟಿಯಾಗಿ ಹೋಗಿರಿ. ” ಎಂದು ತೆಪ್ಪಗೆ ಮುಖ ಮಾಡಿಕೊಂಡು ಉಸುರಿದನು. ಆದರೂ ಕುಲಕರ್ಣಿಗೆ ಸಮಾಧಾನವಾಗಲಿಲ್ಲ. “ ಇನ್ನೊಮ್ಮೆ ಕಳಿಸಬೇಡ ” ಇದು ಕಡೆಯ ಸಂದೇಶ ಎಂದು ಹೇಳಿ ಕೃಷ್ಣನನ್ನು ಬೀಳ್ಕೊಟ್ಟು ದವಾಖಾನೆಗೆ ಬಂದು ಸೇರಿದನು

ಬಾಬು ಕುಲಕರ್ಣಿ ಹಾದಿಯನ್ನು ನೋಡುತ್ತ ಕುಳಿತಿದ್ದನು. ಕುಲಕರ್ಣಿಯು ಡಾಕ್ಟರರಿಗೆ ಭೆಟ್ಟಿಯಾಗಿ ರೋಗಿಯ ಪರಿಸ್ಥಿತಿಯನ್ನು ಕೇಳಿಕೊಂಡು ರೋಗಿಗೆ ಭೆಟ್ಟಿಯಾಗಿ ಅವನಿಗೆ ಧೈರ್ಯ ಹೇಳಿ ಹಾಗೆಯೇ ಮೋಟಾರಕ್ಕೆ ಬಂದನು. ಬಾಬು ಚಾಲೂ ಮಾಡಿದನು ನೊಂದ ಮನದ ಭಾರವಾದ ಮನಸ್ಸು ಕಮಲಳನ್ನು ನೆನಿಸಹತ್ತಿತು ಈ ದಿವಸವೂ ಬರುವಾಗ ಅವಳಿಗೆ ಹೇಳಿ ಬರಲಿಲ್ಲ. “ ಪಾಪ! ಎಷ್ಟು ಚಡಪಡಿಸಿರಬಹುದು? ತನ್ನ ಗಂಡನನ್ನು ಬಿಟ್ಟು ನನ್ನನ್ನು ಈ ಬಗೆಯಾಗಿ ಆರಾಧ್ಯ ದೇವನಂತೆ ಬಗೆಯುವಳಲ್ಲಾ. ಏನು ಮಾಡಲಿ? ಅವಳಿಗೆ ಎಷ್ಟು ತಾಪವಾಗಿರಬಹುದು ಇವಳಂತೆ ನನ್ನ ಹೆಂಡತಿಯೂ ನನ್ನ ಹೇಳಿಕೆಯಂತೆ ನಡೆದಿದ್ದರೆ! ನಾನೇಕೆ ಪರರ ಹೆಂಗಸರ ಗುಣಕ್ಕೆ ಮರುಳಾಗಬೇಕಾಗುತ್ತಿತ್ತು? ನಿಜವಾಗಿ ಅವಳು ನನ್ನ ದೇವಿ. ಅವಳನ್ನು ಒಮ್ಮೆ ನನ್ನನ್ನು ಪ್ರೀತಿಸುವೆಯಾ? ಎಂದು ಕೇಳಲೇ? ಕೇಳೇ ತೀರುವೆ. ಅವಳೇನೆಂದಾಳು? ಏನು ತಿಳಿದಾಳು? ಪಾಪ! ಲಗ್ನವಾದ ಬಾಲೆ ಅವಳನ್ನು ಕೇಳುವ ಬಗೆಯಾವರೂ ಹೇಗೆ? ಅವಳೇ ನಿಜವಾಗಿ ನನ್ನನ್ನು ಪ್ರೀತಿಸುತ್ತಿದ್ದರೆ ಒಂದು ದಿವಸ ತಾನೇ ಕೇಳುವಳು. ನಾನೇಕೆ ಕೇಳಬೇಕಾಗುವದು? ಆಗಲಿ. ” ಈ ಬಗೆಯಾಗಿ ಅನೇಕ ಮನೋರಾಜ್ಯದ ವಿಚಾರದಲ್ಲಿ ಕುಳಿತಾಗ ಕಾರು ಬಂದು ದವಾಖಾನೆ ಬಾಗಿಲಲ್ಲಿ ನಿಂತಿತು

ಕಾರು ಸಪ್ಪಳವಾದ ಕೂಡಲೇ ಕುಲಕರ್ಣಿಯನ್ನು ಹುಡುಕುತ್ತಿದ್ದ ಕಮಲಳು ಕಿಡಿಕಿಯು ಹೊರಗೆ ಹಣಿಕಿಕ್ಕಿದಳು. ಕುಲಕರ್ಣಿಯು ಅವಸರ ದಲ್ಲಿ ಇಳಿದು ಬಂದು " ಕಮಲ, ಬೇಜಾರವಾಯಿತೇ ? "

" ಆಗದೇನು ? ಹೇಳದಲೆ ಹೋಗಿ ಮನ ನೋಯಿಸುವ ಕೆಲಸದಲ್ಲಿ ನಿಮಗೆ ಆನಂದವೇ ? "

" ಛೀ, ಹುಚ್ಚೀ, ಹಾಗ ತಿಳಿಯಬೇಡ. ಅರ್ಜೆಂಟ ಕೇಸಿತ್ತು ಹೋಗಿದ್ದೆ. " ಎಂದು ಕೋಟ ತೆಗೆದನು. ಅಷ್ಟರಲ್ಲಿ ಕೈಕಾಲಿಗೆ ಕಮ ಲಳು ನೀರು ಕೊಟ್ಟಳು. ಇದನ್ನೆಲ್ಲ ನೋಡುತ್ತಿದ್ದ ದವಾಖಾನೆಯ ಪೇಶಂಟರು ಏನು ? ಇವರು ಗಂಡ ಹೆಂಡಿರೋ ಹೇಗೆ ಎಂಬ ವಿಚಾರದಲ್ಲಿ ತೊಡಗಿದರು.

ಕಮಲಳಿಗೆ ಕುಲಕರ್ಣಿಯ ಸಹವಾಸದಲ್ಲಿ ಒಂದು ಬಗೆಯ ಆನಂದ. ಅವರಿಲ್ಲದಿದ್ದರೆ ಆಕೆಗೆ ಕೆಲಸವೇ ಸಾಗುತ್ತಿರಲಿಲ್ಲ. ನನಗೆ ಲಗ್ನವಾಗ ದಿದ್ದರೆ ಇವರನ್ನೇ ಆಗುತ್ತಿದ್ದೆ. ಈಗಾದರೇನು ? ಅವರನ್ನೇ ಪ್ರೀತಿಸಿದ ರಾಯಿತು. ನನಗೂ ಆಧಾರ ಬೇಕು. ಅವರಿಗೂ ಆಧಾರಬೇಕು. ಅಂದ ಮೇಲೆ ಇದರಲ್ಲೇನೂ ತಪ್ಪು ಎಂಬ ವಿಚಾರದಲ್ಲಿ ಮಗ್ನಳಾದಾಗ ಕುಲಕರ್ಣಿಯು ದವಾಖಾನೆಯಲ್ಲಿ ಪ್ರವೇಶಿಸಿದರು.

" ಯಾಕೆ ? ಚಿಂತೆಯಲ್ಲಿ ಮುಳುಗಿರುವಿರಿ ? " ಅನ್ನುತ್ತ ಅಲ್ಲಿರುವ ಖುರ್ಚಿಯನ್ನು ಆಶ್ರಯಿಸಿದರು. ಡಾಕ್ಟರರು ಬಂದಿಲ್ಲವೇ ? ಎಲ್ಲ ರೋಗಿ ಗಳು ಆರಾಮವಿರುವರೋ ?

" ನಿಮಗೆ ಬಂದ ಕೂಡಲೇ ಡಾಕ್ಟರರ ಚಿಂತೆ. ರೋಗಿಯ ಚಿಂತೆ. ಎಲ್ಲ ರೋಗಿಗೂ ಔಷಧ ಕೊಡುವಿರಿ. ನನಗೂ ಸ್ವಲ್ಪ ಕೊಡಿರಲ್ಲಾ ! " ಎಂದು ನಕ್ಕಳು.

" ಏನು ಮಾಡುವದು ? ನಾನು ಕೊಟ್ಟರೆ ನೀನು ತೆಗೆದುಕೊಳ್ಳ ಬೇಕಲ್ಲಾ ? ಎಲ್ಲರಂಥವಳೇ ? ನೀನು. "

" ಅಂದರೆ ನಾನು ಎಲ್ಲರಂಥವಳಲ್ಲವೇ ? " ಎಂದು ಹುಸಿ ನಕ್ಕಳು.

" ಅಲ್ಲ, ನಿನ್ನ ಸ್ವಭಾವ ಬಹಳ ವಿಚಿತ್ರ. ಒಮ್ಮೆ ಜನ ಸೇವೆಯ ನ್ನುವೆ. ಒಮ್ಮೆ ನಮ್ಮ ಸುಖಕ್ಕೆ ನಾವು ಜನರಿಗೆ ಹೇಗಾದರೇನು. ಆಗು

ವದೇನು? ಅವರೇನು ಅವರ ಅಪ್ಪನ ಮನೆಯಿಂದ ಕೊಡುವರೇ ಅನ್ನುವಿ. ಒಟ್ಟಾರೆ ನೀನು ವಿಚಿತ್ರಳು" ಎಂದು ಕರವಸ್ತ್ರದಿಂದ ಮುಖ ಒರೆಸಿ ಕೊಳ್ಳಹತ್ತಿದನು.

"ಹಾಗೇನಿಲ್ಲ ನೀವು ಕೊಟ್ಟರೆ ತೆಗೆದುಕೊಳ್ಳುವೆ." ಎಂದು ನಾಚಿ ಕೆಯಿಂದ ಮುಖ ಕೆಳಗೆ ಹಾಕಿದಳು.

"ಕೊಡುವೆ ಕೊಡುವ ವಿಚಾರವನ್ನು ಬಹಳ ದಿನಗಳಿಂದ ನಿನ್ನ ಗುಣವನ್ನರಿತು ಅಂದೇ ವಿಚಾರ ಮಾಡಿದ್ದೇನೆ. ಅದಕ್ಕೆ ಕೆಲ ಸಮಯ ಬೇಕು. ನಿಜಗುಣವರಿಯದೆ ಭಾವೀ ಬೀಳುವದು ಬೇಡ ಅಂತಾ ಬಿಟ್ಟಿದ್ದೆ." ಎಂದು ನಗಹತ್ತಿದನು.

"ನಿಮ್ಮ ಔಷಧ ಸಂಜೀವಿನಿ ಇದ್ದ ಹಾಗೆ. ಹೆಣಕ್ಕೆ ಸಹ ಜೀವ ಬರುವದು."

"ಸಾಕು, ಹೊಗಳುವಿಕೆ ನಿಜವಾಗಿ ನನ್ನ ಔಷಧ ಬೇಕೇ?" ಎಂದು ಕಣ್ಣುಗಳನ್ನು ಪಿಳಕಿಸದೆ ಕಮಲಳನ್ನು ನೋಡಹತ್ತಿದನು.

"ಇನ್ನೂ ಹೇಳಬೇಕೇ? ನನ್ನ ಬಾಯಿಂದಲೇ ಹೇಳಿಸಿಕೊಳ್ಳು ವಿರಾ?" ಎಂದು ತಲೆ ತಗ್ಗಿಸಿದಳು.

ಕುಲಕರ್ಣಿಯ ಕೈ ಮುಂದೆ ಆದವು. ಕಮಲಳು ಅವರ ತೋಳಿನಲ್ಲಿ ಬಂಧಿತಳಾದಳು. ಮುತ್ತುಗಳ ಸುರಿಮಳೆಯಾಯಿತು ಹಸಿದವರಿಗೆ ಅನ್ನ ಸಿಕ್ಕಂತೆ ಆ ಗತಿಗೆಟ್ಟ ತರುಣ ತರುಣಿಯರು ಜಗತ್ತನ್ನೇ ಮರೆತರು. "ರೂಮಿನ ಬಾಗಿಲು ತೆರೆದಿದೆ" ಎಂದು ಕಮಲಳು ಉಸುರಿದಳು. ಕುಲ-ಕರ್ಣಿಯ ತೋಳುಗಳಲ್ಲಿಯೇ ಆನಂದವನ್ನು ಹೊಂದುತ್ತಿದ್ದಳು. ಕುಲಕ-ರ್ಣಿಯು ಇನ್ನು ಎದ್ದು ಬಾಗಿಲು ಹಾಕಬೇಕೆಂದು ಅವಳನ್ನು ಈಝೀ ಚೆಯರ್ (Easy-chait) ದಲ್ಲಿ ಮಲಗಿಸಿ ಬಾಗಿಲಿಗೆ ಬಂದನು. ಆಗ ಅವರಿಗೆ ಪೇಶಂಟುಗಳು ಮಗ್ಗುಲಲ್ಲಿ ಇದ್ದುದರ ವಿಚಾರ ಸಹ ಉಳಿದಿದ್ದಿಲ್ಲ. ಡಾಕ್ಟರರ ಕಾರುಗಾಡಿಯು ಸಪ್ಪಳವಾಯಿತು. ಇಬ್ಬರಿಗೂ ಹೊರ ಜಗತ್ತಿನ ಜ್ಞಾನವಾಯಿತು. ಬೆಗನೆ ಎದ್ದು ಬಟ್ಟೆ ಸರಿ ಪಡಿಸಿಕೊಂಡು ಇಬ್ಬರೂ ಏನೂ ಅರಿಯದವರಂತೆ ತಮ್ಮ ಕೆಲಸಕ್ಕೆ ತೊಡಗಿದರು.

೮

ರಾತ್ರಿಯಲ್ಲಿ ಪತಿಯು ಕೂಡ ವಾದ ಮಾಡಿ ಬೆಳಗಿನ ಜಾವದಲ್ಲಿ ಬೇಗನೆ ಎದ್ದು ಕಮಲಳು ಸ್ನಾನ ಮುಗಿಸಿಕೊಂಡು ತನ್ನ ಬಿಳಿಯ ಪತ್ತಲ ಮತ್ತು ಬಿಳಿಯ ಚೋಳಿ ಪದ್ಧತಿಯ ಪ್ರಕಾರ ಧರಿಸಿ ಸರಿಯಾಗಿ ಜಡೆ ಹೆಣೆದುಕೊಂಡು ಬೇಗನೆ ದವಾಖಾನೆಗೆ ಬಂದಳು. ರಾತ್ರಿಯಲ್ಲಿ ಪತಿಯು ಆಡಿದ ಪ್ರತಿಯೊಂದು ಮಾತುಗಳು ಅವಳ ಕರ್ಣಪಟಲದಲ್ಲಿದ್ದವು. ಅವು ಅವಳಿಗೆ ಬಹಳ ವೇದನೆ ಮಾಡುತ್ತಿದ್ದವು. ಆ ದುಃಖದಿಂದ ಅವಳ ನಯನೇಂದ್ರಿಯಗಳು ರಕ್ತರಂಜಿತವಾಗಿದ್ದವು. ಅವಳಿಗೆ ದಿಕ್ಕೇ ತೋಚದಾಯಿತು. " ನಾನು ಕುಲಕರ್ಣಿಯನ್ನು ಪ್ರೀತಿಸಿದ್ದು ತಪ್ಪಾಯಿತೇ ? ನಾನೂ ಮಾನವಳು. ನನಗೂ ಹೃದಯವಿದೆ ಮನಸ್ಸಿದೆ. ಹೆಣ್ಣೆಂದರೆ ಅದೇನು ಹೃದಯವಿಲ್ಲದ ಬೊಂಬೆಯೇ ? ನನ್ನದಾವರೇನು ತಪ್ಪು ಇದರಲ್ಲಿ ? ನಾನು ನನಗೆ ಬೇಕಾದವರನ್ನು ಪ್ರೀತಿಸುವೆ ಪ್ರೀತಿಸುವ ಹಕ್ಕು ನನ್ನದು. ತಾವೇ ಪ್ರಕೃತಿ ಸರಿಯಾಗಿಟ್ಟುಕೊಂಡು ಬಾಳಿದ್ದರೆ ಈ ಹಾಳು ಬಾಳನ್ನು ಅನುಭವಿಸುವ ಪ್ರಸಂಗ ಏಕೆ ಬರುತ್ತಿತ್ತು ? ಸೂಳೆಯರು ಇವರ ಮನೆಯ ಧರ್ಮ ಪತ್ನಿಯರು ಆಗ ಮೆರೆದರು. ಈಗ ಕುಳಿತರು ನನ್ನದು ಈಗ ಪ್ರಾಯದ ಜೀವನ ನನಗೆ ಬೇಕಾದಾಗ ಸುಖ ಶಾಂತಿಯಿಲ್ಲದಿದ್ದರೆ ನಾನು ಇವರ ಕೂಡ ಬಾಳುವದಾದರೂ ಏತಕ್ಕೆ ? ನಮ್ಮ ಸಮಾಜದಲ್ಲಿಯಂತೂ ಬಿಡುಗಡೆ ನಡೆಯುತ್ತವೆ. ಇನ್ನೂ ನಾನು ಸೋಡಚೀಟಿ ಕೇಳಿಲ್ಲ. ಇದು ಇವರ ದೈವ ! ದುಡಿದು ಹಾಕುವೆ. ಕುಳಿತು ತಿನ್ನದೇ ? ಅನೇಕ ತರಹದ ತಾಪ ಆಗಲಿ, ಪ್ರಸಂಗ ಬರಲಿ ಇನ್ನು ನಾನು ಹೆದರೆನು. ನನ್ನವರಿಗೂ ಹೇಳುವೆ. ಮುಂದಿನ ವಿಚಾರ " ಎಂದು ಸುಮ್ಮನೆ ಕುಳಿತಳು.

ಕುಲಕರ್ಣಿಯು ದಿನದಂತೆ ಬಂದು ಮುಗುಳು ನಗೆಯಿಂದ ಗೌರವಿಸಿದನು ಆದರೆ ಕಮಲಳ ಕಣ್ಣಲ್ಲಿ ನೀರು, ಇದನ್ನು ಕಂಡು ಕುಲಕರ್ಣಿಗೆ ದಿಕ್ಕೇ ತೋಚದಾಯಿತು.

" ಯಾಕೆ ? ಕಮಲ, ಏನಾಯಿತು ? ನಿಮ್ಮವರಿಗೆ ಸರಿಯೇ ? " ಎಂದು ನಾನಾ ಬಗೆಯಾಗಿ ಪ್ರಶ್ನಿಸಿದನು. ಒಂದಕ್ಕೂ ಉತ್ತರವಿಲ್ಲ. ಗಲ್ಲ

ವನ್ನು ಹಿಡಿದು " ಯಾಕೆ ? ಏನಾಯಿತು ? ಡಾಕ್ಟರರು ಏನು ಅಂದರೆ ? " ಎಂದು ನಾನಾ ಬಗೆಯಾಗಿ ಪ್ರಶ್ನಿಸಿದರು.

ಕಮಲಳು ಮನವಾರೆ ಅತ್ತಳು. ದುಃಖವು ಶಮನವಾಯಿತು. ಆ ಮೇಲೆ ತನ್ನ ಗಂಡನಿಂದಾದ ರಾತ್ರಿಯ ವಾಗ್ಬಾಣಗಳ ಸುರಿ ಮಳೆಯನ್ನು ಹೇಳಿದಳು. " ಇನ್ನು ನಾನು ಇಲ್ಲಿರಲು ಶಕ್ಯವಿಲ್ಲ. ನನ್ನನ್ನು ತಮ್ಮ, ತಮ್ಮನ ಊರಿಗೆ ಕರೆದುಕೊಂಡು ಹೋಗುವರಂತೆ. ಇಲ್ಲಿಯ ನಮ್ಮ ನಿಮ್ಮ ಪ್ರೇಮದ ನಾಟಕ ಅವರಿಗೆ ತಿಳಿದಿದೆ. ಏನು ಮಾಡುವದು ? "

" ಮಾಡುವದೇನು ? ನಾನು ನಿನ್ನನ್ನು ಕಡೆತನಕ ಹಿಡಿಯುವೆ. "

" ನಮ್ಮ ನಿಮ್ಮ ಜಾತಿಗಳು ಭಿನ್ನವು. ಮುಂದೆ ನನ್ನ ಗತಿ ? "

" ನಿನ್ನ ಹಣವು ನಿನ್ನನ್ನು ಕಾಯುವದು. ಯಾರ ಕಾವಲೂ ಬೇಡ. ಯಾರ ರಕ್ಷಣೆಯೂ ಬೇಡ. ದೇವರು ನಿನ್ನನ್ನು ಕಾಯುವನು. "

" ಅದೇನೇ ಇರಲಿ ಮುಂದಿನ ವಾರ ನಾನು ಊರು ಬಿಡಲೇ ಬೇಕು. ಸ್ವಲ್ಪ ದಿನ ಹೋಗಿ ಬರುವೆ. ಅವರನ್ನು ಮೆಟ್ಟಿಗೆ ಹಚ್ಚಿ ಸಂತೈಸಿ ಬರುವೆ. ಇಲ್ಲವೆ ಸೋಡಚೀಟಿ ತೆಗೆದುಕೊಂಡು ಬರುವೆ. ನಿಮ್ಮನ್ನು ಕೊಡುವೆ. "

" ಹೋಗ ಕೂಡದು. "

" ಸದ್ಯಕ್ಕೆ ಶಕ್ಯವಿಲ್ಲ. ಹೋಗಲೇಬೇಕಾಗುತ್ತದೆ. ಸಮಾಜಕ್ಕಾದರೂ ಹೆದರಲೇಬೇಕಾಗುತ್ತಿದೆ. " ಎಂದು ಕಣ್ಣೀರು ಉದುರಿಸಹತ್ತಿದಳು.

" ಸಮಾಜದ ಸಮಾಧಿಯಾಗುವವರೆಗೆ ಶಾಂತಿಯಿಲ್ಲ. ಆ ಶಾಂತಿಯು ದೊರೆಯಬೇಕಾದರೆ ಸಮಾಜದ ಪುನರ್‌ರಚನೆಯಾಗಬೇಕಾಗುತ್ತದೆ. "

"ಅದರ ಪುನಃ ರಚನೆಯಾಗುವದರಲ್ಲೇ ನಮ್ಮ ಸಮಾಧಿಯಾಗುತ್ತದೆ. ಅದೇನೇ ಇರಲಿ ನೀವು ಒಂದು ವಾರ ಹೇಗಾದರೂ ತಾಳಿಕೊಳ್ಳಿರಿ. ಎಂದು ಒಂದೇ ಸವನೆ ಕಣ್ಣೀರು ಸುರಿಸಹತ್ತಿದಳು.

" ನಾನು, ನೀನೇ ನನ್ನ ಸರ್ವಸ್ವವು, ನೀನೇ ನನ್ನ ಜೀವನದ ಬೆಳಕು. ಅಂತಾ ತಿಳಿದಿದ್ದೆ. ನೀನಿಲ್ಲದೆ ನಾನು ಬದುಕಲಾರೆ. "

ಹಾಗೇನೂ ಮಾಡಬೇಡಿರಿ. ನಾಳೆಯೇ ಊರಿಗೆ ಹೋಗಿ ಅವರನ್ನು ಬಿಟ್ಟು ಬರುವೆ."

"ನಾಳೆ ಬೇಡಾ. ನಾಡದ ಹೋಗು."

"ಆಗಲಿ, ನಿಮ್ಮಿಷ್ಟವಂತೆ ಮಾಡುವೆ" ಎಂದು ಹೇಳಿ ಕಮಲಳು ತನ್ನ ರೂಮು ಸೇರಿದಳು.

"ಜಗತ್ತಿನಲ್ಲಿ 'ಯಾರಿಗೆ ಯಾರಿಲ್ಲ' ಎಲ್ಲರೂ ತಮ್ಮ ಹಿತಕ್ಕಾಗಿ ಬಡಿದಾಡುವರು. ಕೆಲರು ಸಮಾಜಕ್ಕಾಗಿ ಹೆದರುವರು. ಕೆಲರು ಮನೆಯ ಜನರಿಗಾಗಿ ಹೆದರುವರು. ನಾನರೆ ಇವಳನ್ನೇಕೆ ಅಷ್ಟು ಪೀಡಿಸಿ ಸಮಾಜ ದ್ರೋಹಕ್ಕೆ ಪಾತ್ರ ಮಾಡಲಿ? ಇವಳಲ್ಲಿ ಅಷ್ಟು ಧೈರ್ಯವಿಲ್ಲ. ಇನ್ನು ಇವಳು ಊರಿಗೆ ಹೋದ ಬಳಿಕ ತಿರುಗಿ ಬರುವದು ಶಕ್ಯವಿಲ್ಲ. ಇವಳ ಊರು ಯಾವದೆಂಬುದನ್ನು ಮಾತ್ರ ಕೇಳೋಣ. ಸಾಯುವ ಕಾಲದಲ್ಲಿ ಯಾವರೂ ಅವಳಲ್ಲಿ ಸಾಗೋಣ. ಅಲ್ಲೇಕೆ? ಹೆಂಡತಿಯಿರುವಳಲ್ಲಾ! ಅಲ್ಲಿ ಹೋಗಲಾರೆನು. ನನ್ನ ಅನುಮತಿ ಇಲ್ಲದೆ ನಡೆಯುವ ಹೆಂಡತಿಗಿಂತ ನನ್ನನ್ನು ಮನದಲ್ಲಿ ಪೂಜಿಸುವ ಕಮಲಳೇ ಮೇಲು. ಆಕೆಯ ಕೈಯಿಂದಲೇ ನನ್ನ ಅಂತ್ಯಕ್ರಿಯೆ. ನಾನು ಬದುಕಿದ್ದದ್ದು ಸತ್ತದ್ದು ಕೂಡ ಮನೆಯವಳಿಗೆ ತಿಳಿಸೆನು. ಇವಳು ನಾಡದು ಹೋಗುವಳು. ನಾನು ನಾಳೆಯೇ ಈ ಊರು ಬಿಡುವದು ನಿಶ್ಚಯವಾಗಿಯೂ, ಈ ಊರು ಬಿಡುವದು! ಇನ್ನು ಇಲ್ಲಿ ಜೀವಿಸಲಾರೆ." ಎಂದು ವಿಚಾರ ಮಾಡಿದನು.

ಡಾಕ್ಟರರು ಬಂದ ನಂತರ ಅವರಲ್ಲಿ ಹೋಗಿ ಕುಲಕರ್ಣಿಯು "ಮನೆ ಯಲ್ಲಿ ಅಡಚಣಿಯಿದೆ. ಶಿಲ್ಲಕ ಉಳಿದ ಪಗಾರ ಮತ್ತು ನಿಮ್ಮಲ್ಲಿಟ್ಟ ಯಾವತ್ತ ಹಣ ಕೊಡಿರಿ" ಎಂದು ಕೇಳಿದನು.

"ಯಾಕೆ? ಈಗೇಕೆ ಎಲ್ಲ ಹಣ! ಕನಿಷ್ಠ ನಾಲ್ಕು ಸಾವಿರ ಆಗುವದಲ್ಲಾ?"

"ಹೌದು ಆಗುವದು ನನಗೆ ಬೇಕಾಗಿದೆ."

ಡಾಕ್ಟರರು ಬಾಬುನನ್ನು ಬ್ಯಾಂಕಿಗೆ ಕಳಿಸಿ ಹಣ ತರಿಸಿದರು. ಕುಲಕರ್ಣಿಯನ್ನು ಕರೆದು ಅವರಿಗೆ ಎಲ್ಲ ಹಣವನ್ನು ಕೊಟ್ಟು ಮುಟ್ಟಿತೆಂದು ಪಾವತಿ ಬರೆಯಿಸಿಕೊಂಡರು.

ಈ ಹಣದಲ್ಲಿ ಏನೇನು ಮಾಡಬೇಕು ಎಂದು ವಿಚಾರದಲ್ಲಿರುವಾಗ ಮಗು ಪುಷ್ಪ ನೆನಪಿಗೆ ಬಂತು ಅದರ ಸಂರಕ್ಷಣೆಗೆಂದು (೧೦೦೦) ರೂ. ಚೆಕ್ಕು ತೆಗೆದು ಕಳಿಸುವದು, ೫೦೦ ರೂಪಾಯಿ ಕಮಲಳಿಗೆ ಖರ್ಚಿಗೆ ಕಳಿಸಿಕೊಡುವದು ನಿಶ್ಚಯ ಮಾಡಿದನು.

ಟಪಾಲ ಆಫೀಸಿಗೆ ಹೋಗಿ ಪಾಕೀಟ ತೆಗೆದುಕೊಂಡು ಬಂದನು. ಹಾಗೆಯೇ ಬ್ಯಾಂಕಿಗೆ ಹೋಗಿ ಸಾವಿರದ ಚೆಕ್ಕು ತೆಗೆದುಕೊಂಡನು. ಎರಡನ್ನೂ ಸರಿಯಾಗಿ ಅವರವರ ಅಡ್ರೆಸ್ಸಿಗೆ ಬರೆದು ಹಾಕಿ "ಇನ್ನು ಕೆಲಸ ತೀರಿತು ಹೊರಡುವೆ. ಇನ್ನು ಯಾರ ಅಂಜಿಕೆಯೂ ನನಗಿಲ್ಲ." ಎಲ್ಲಿಗೆ ಹೋಗುವದು ? ಏನು ಮಾಡುವದು ? ಒಂದೂ ನಿರ್ಧರಿಸಲಿಲ್ಲ. ಹಾಗೇ ದವಾಖಾನೆಗೆ ಬಂದನು. ದವಾಖಾನೆ ಬಿಡುವ ವೇಳೆಯಾಯಿತು. ಕಮಲಳು ತನ್ನ ಕೆಲಸ ತೀರಿಸಿಕೊಂಡು ವೇಟಿಂಗ ರೂಮಿಗೆ ಬಂದಳು. ಕುಲಕರ್ಣಿಯ ಮುಖ ನೋಡಿ ಬೆಸ್ಸಗೆ ನಿಂತಳು. "ಯಾಕೆ, ಮೈಯಲ್ಲಿ ಸರಿಯಿಲ್ಲವೇ ?"

"ಏನು ಆಗಬೇಕಾಗಿತ್ತು ಎಲ್ಲವೂ ಆಯಿತು. ಇನ್ನು ನೀವು ಹೋಗುವ ಊರರೆ ಯಾವದು ? ಅದನ್ನರೆ ಅಷ್ಟು ಹೇಳಿರಿ. ಸಾಯುವ ಕಾಲದಲ್ಲಿ ಬಂದು ಭೆಟ್ಟಿ ಕೊಡುವೆನು."

"ಹೀಗೇಕೆ ಅಪಶಬ್ದ ಆಡುವಿರಿ"

"ಅಪಶಬ್ದ ? ಇನ್ನೆಲ್ಲಿಯ ಅಪಶಬ್ದ ! ದೀಪ ಆರುವ ಮುಂದೆ ದೊಡ್ಡದಾಗಿ ಬೆಳಕನ್ನು ಜಾಸ್ತಿ ಕೊಡುವಂತೆ ಸಾಯುವ ಮುಂದೆ ನಿನ್ನಿಂದ ಹೆಚ್ಚಿಗೆ ಸುಖ ಸಿಕ್ಕೀತು. ಸಾವು ಸಮೀಪಿಸಿದೆ. ಇನ್ನು ಬಹಳ ದಿನಗಳಿಲ್ಲ. ನೀವು ಹೋಗುವ ಊರು ಯಾವೂರು ?"

"ಗೋಕಾಕ ತಾಲೂಕ ಪೈಕಿ ಬೆಟಗೇರಿ ಎಂಬ ಗ್ರಾಮ."

"ಆಗಲಿ, ನಮಸ್ತೆ" ಎಂದು ಇಬ್ಬರೂ ದವಾಖಾನೆಯನ್ನು ಬಿಟ್ಟು ಭಾರವಾದ ಮನದಿಂದ ರೂಮಿಗೆ ಹೋದರು. ಮನೆಯಲ್ಲಿ ಊಟವಿಲ್ಲದೆ

ಹಾಗೇ ಮಲಗಿಕೊಂಡನು. ತಾಯಿಯು ಬಂದು "ಶೀನು, ಏಳುವದಿಲ್ಲವೇ ಊಟಕ್ಕೆ?" ಎಂದು ಎರಡು, ಮೂರು ಸಾರೆ ಕೇಳಿದರು. ಕಡೆಗೆ ಶೀನು ಎದ್ದು ಊಟಕ್ಕೆ ಕುಳಿತನು ದಣಿದ ಮನಕ್ಕೆ ಊಟ ರುಚಿಸಲಿಲ್ಲ. ಹಾಗೇ ಊಟದ ಶಾಸ್ತ್ರ ಮುಗಿಸಿ "ಅಮ್ಮಾ ನಾನು ಈ ಊರಲ್ಲಿಯ ನವಕರಿ ಬಿಟ್ಟು ಬೇರೆ ಕಡೆಗೆ ಪುಣೆ ಅಥವಾ ಬೊಂಬಾಯಿಗೋ ಹೋಗಿ ಹಿಡಿಯುವವನಿದ್ದೇನೆ. ಅದಕ್ಕೆ ನಾನು ನಾಳೆ ಹೊರಡುವೆ. ನೀನೂ ಮನೆಗೆ ಹೋಗು. ಈ ಸಾವಿರ ರೂಪಾಯಿ ತೆಗೆದುಕೋ. ಎಲ್ಲವನ್ನೂ ಕೊಡಬೇಡ. ನಿನ್ನಲ್ಲಿ ಇಟ್ಟುಕೊಂಡು ಸಾಗಿಸಿಕೊಂಡು ಹೋಗು ನನಗೆ ಎಲ್ಲವೂ ಅನುಕೂಲವಾದ ನಂತರ ಪತ್ರ ಬರೆಯುವೆನು." ಎಂದು ಕೆಳಮುಖ ಮಾಡಿ ಹೇಳಿದನು. ಗಂಗಮ್ಮನವರಿಗೆ ಒಂದೂ ತೋಚದಾಯಿತು.

"ಶೀನೂ, ಏನು ವಿಚಾರ ನಡೆಸಿರುವೆ?"

"ಏನಿಲ್ಲಮ್ಮಾ, ಹೆಚ್ಚಿಗೆ ದುಡ್ಡು ಗಳಿಸುವ ವಿಚಾರ."

"ಆಗಲಿ, ನಿನಗೆ ತಿಳಿದಂಗ ಮಾಡಪ್ಪಾ, ನಾನೇನು ಹೆಂಗಸು. ನನಗೆಷ್ಟು ತಿಳಿಯುವದು."

"ಆಗಲಿ ನಾಳೆ ಬೆಳಗಿನ ಆರರ ಗಾಡಿಗೆ ಹೋಗಿ ಬಿಡವ್ವಾ" ಎಂದು ಹೇಳಿ ಕುಲಕರ್ಣಿಯು ತಾನು ಇನ್ನು ಏನು ಮಾಡಬೇಕು? ಎಂದು ವಿಚಾರ ಮಾಡುತ್ತ ಎದ್ದು ಕೈತೊಳೆದುಕೊಂಡು ಹಾಸಿಗೆಯನ್ನು ಹಾಸಿದನು. ಹಾಸಿಗೆಯಲ್ಲಿ ಮಲಗಿದ್ದಷ್ಟೇ ತಡ. ತಲೆಯಲ್ಲಾ ವಿಚಾರದಿಂದ ಕಾಯ್ದಿತ್ತು. ಅದರಿಂದ ಅವನಿಗೆ ಅರಿಯದಂತೇ ನಿದ್ರಾದೇವಿಯು ಅವನನ್ನು ಮುತ್ತಿದಳು.

ಎಚ್ಚರವಾದಾಗ ಕಾಗೆಗಳ ಕಾ, ಕಾ, ಶಬ್ದವು ಹಕ್ಕಿಗಳ ಚಿಲಿಪಿಲಿ ನಿನಾದವೂ, ಕೋಳಿಗಳ ಕೂಗು, ಒಂದೇ ಸವನೆ ನಡೆದಿತ್ತು. ಅಡಿಗೆಯ ಮನೆಯಲ್ಲಿ ತಾಯಿಯು ಸ್ನಾನ ಮುಗಿಸಿ "ಏಳು ನಾರಾಯಣಾ ಏಳು ಲಕ್ಷ್ಮೀರಮಣ" ಎಂದು ಹಾಡುತ್ತಿದ್ದರು. ತಾಯಿಯವರನ್ನು ಊರಿಗೆ ಕಳಿಸುವ ಕೆಲಸ ಒಂದು ತನ್ನದಾದ್ದರಿಂದ ಬೇಗನೆದ್ದು

ಟಾಂಗಾ ತರಬೇಕಾದ್ದರಿಂದ ಕುಲಕರ್ಣಿಯು ಬೇಗನೆ ಹಾಸಿಗೆಯಿಂದ ಎದ್ದು ಮುಖಮಾರ್ಜನ ತೀರಿಸಿದನು. ಅಷ್ಟರಲ್ಲಿ ೫॥ ಘಂಟೆಯಾಯಿತು. ಹೊರಗೆ ಟಾಂಗಾ ತರುವ ಸಲುವಾಗಿ ಹೊರಟಿದ್ದ ಕುಲಕರ್ಣಿಗೆ ಅಕಸ್ಮಾತ್ ಒಂದು ಟಾಂಗಾ ಎದುರಿಗೆ ಬಂದಿತು. ಅದನ್ನೇ ಬಾಡಿಗೆ ಠರಾಯಿಸಿ ತಂದು ತಾಯಿಯನ್ನು ಎಬ್ಬಿಸಿ ಅದರಲ್ಲಿ ಕುಳ್ಳಿರಿಸಿ ಅವರ ಗಂಟು ಮೋಟೆ ಅಲ್ಲಿಟ್ಟನು. ತಾಯಿ ಪಾದಕ್ಕೆ ಎರಗಿದನು. ಆಗ ಅವನ ಕಣ್ಣಿನಿಂದ ನೀರು ಹೊರಟವು.

"ಶೀನೂ, ಮೇಲಿಂದ ಮೇಲೆ ಪತ್ರ ಬರೆ ಮರೆಯಬೇಡ. ಆರೋಗ್ಯ ಕಾಯ್ದುಕೊಂಡಿರು" ಎಂದು ಹೇಳುವಾಗಲೇ ಟಾಂಗೆ ಹೊರಟಿತು. ತಾಯಿಯನ್ನು ಮರೆಯಾಗುವವರೆಗೆ ನೋಡಿದನು, ದುಃಖಿಸಿದನು.

ಏಳೂಕಾಲ ಗಂಟೆಗೆ ಕುಲಕರ್ಣಿಯು ಬೆಳಗಾಂವ ಮೋಟಾರ ಹಿಡಿದು ಬೆಳಗಾಂವದಲ್ಲಿ ಕೆಲದಿನ ವಿಶ್ರಾಂತಿ ಪಡೆಯಲು ಹೊರಟನು. ಹೋಗುವಾಗ ಯಾರಿಗೂ ಏನೂ ಹೇಳಲಿಲ್ಲ. ಕೇಳಲಿಲ್ಲ. ದುಃಖವು ಒತ್ತರಿಸಿ ಬಂದಿತು. ಆದರೂ ಉಡಪಿ ಶಾಮಾಚಾರ್ಯರ ಅಂಗಡಿಯಲ್ಲಿ ಇಡ್ಲಿ ದೋಸ ತಿಂದು ಕಾಫೀ ಕುಡಿದು ಮೋಟಾರ ಹತ್ತಿದನು.

ದಿನದಂತೆ ಏಳೂ ಮುಕ್ಕಾಲು ಘಂಟೆಗೆ ಕಮಲಳು ಬಂದಳು. ಇನ್ನು ನಾವು ನಾಳೆಗೆ ಊರಿಗೆ ಹೋಗುವವರು. ಕುಲಕರ್ಣಿಯನ್ನು ಬಿಟ್ಟು ಹೋಗುವ ಗತಿ ಹೇಗೆ? ಪತಿಗೆ ಬರುವದಿಲ್ಲೆಂದು ಹೇಳಲೇ? ಹೇಳಿದರೆ ನಾಲ್ಕು ಮಂದಿ ಕೂಡಿಸಿ ಅವಮಾನ ಮಾಡುವನು ಒಮ್ಮೆ ನಮ್ಮ ಊರಿಗೆ ಹೋಗಿ ಬೇಕಾದರೆ ಸೋಡಚೀಟಿ ತೆಗೆದುಕೊಂಡು ಬಂದು ಇವರ ಬಳಿಯಲ್ಲಿ ನಿಂತರಾಯಿತು. ಇನ್ನೂ ನನ್ನ ಲಗ್ನವಾಗದಿದ್ದರೆ ಎಷ್ಟು ಒಳಿತಾಗುತ್ತಿತ್ತು? ಇವರನ್ನೇ ಆಗುತ್ತಿದ್ದೆ. ಎಂಥ ದೈವ! ದೇವಾ ನನ್ನನ್ನೇಕೆ ಈ ಪೇಚಿನಲ್ಲಿ ಸಿಕ್ಕಿಸಿದೆ?" ಎಂದು ದೇವರಲ್ಲಿ ಕೋಪಗೊಳ್ಳುತ್ತಾ ದವಾಖಾನೆ ಸೇರಿದಳು. ಇನ್ನೂ ಕುಲಕರ್ಣಿ ಬಂದಿರಲಿಲ್ಲ. ಇನ್ನೊಂದು ೧೦-೧೫ ನಿಮಿಷಗಳಲ್ಲಿ ಬರಬಹುದೆಂದು ದಾರಿ ಕಾಯುತ್ತ ಕುಳಿತಳು. ಹಾಗೇ ಎದ್ದು ಎಲ್ಲ ರೋಗಿಗಳಿಗೂ ಭೆಟ್ಟಿ

ಯಾಗಿ ನಾಳೆ ತಾನು ಊರಿಗೆ ಹೋಗುವದಾಗಿ ಹೇಳಿ ಬಂದಳು. ೮॥ ಘಂಟೆಯಾಯಿತು. ಡಾಕ್ಟರರು ಬಂದರು. ಕುಲಕರ್ಣಿ ಕಾಣದ್ದನ್ನು ಕಂಡು "ಯಾಕೆ? ಕುಲಕರ್ಣಿ ಎಲ್ಲಿ!"

"ಇನ್ನೂ ಬಂದಿಲ್ಲ" ಎಂದು ನಿಡಿದಾದ ಉಸಿರನ್ನು ಬಿಟ್ಟಳು.

"ಯಾಕೆ?"

"ನನಗೆ ಗೊತ್ತಿಲ್ಲ"

ಬಾಬುವನ್ನು ಕರೆದು ಡಾಕ್ಟರರು ಕುಲಕರ್ಣಿಯನ್ನು ಕರೆತರಲು ಹೇಳಿದರು. ಆಗ ಬಾಬು "ಇದೇ ಈಗ ಕುಲಕರ್ಣಿ ಬೆಳಗಾಂವಿಗೆ ಮೋಟಾರದಿಂದ ಹೋದರಂತೆ, ಎಂದು ನಮ್ಮ ಕಿನ್ನರನು ಹೇಳುತ್ತಿದ್ದನು. ಅವನ ಮುಂದೆ ಇದೇ ಕಡೆಯ ಭೆಟ್ಟಿ ಅಂದರಂತೆ" ಎಂದು ಒಂದೇ ಉಸು ರಿನಲ್ಲಿ ಹೇಳಿದನು. ಡಾಕ್ಟರರಿಗೆ ನಿನ್ನೆ ನಾಲ್ಕು ಸಾವಿರ ರೂಪಾಯಿ ಇಸ ಕೊಂಡದ್ದು ಇದಕ್ಕೇ ಆಗಿರಬಹುದೆಂದು ಹೊಳೆಯಿತು. ಕಮಲಳಿಗಂತೂ ದಿಕ್ಕೇ ತಪ್ಪಿತು. "ನಾನು ಬಿಟ್ಟು ಹೋದ ಬಳಿಕ ತನಗೆ ನನ್ನನ್ನು ಬಿಟ್ಟು ಇರಲು ಶಕ್ಯವಿಲ್ಲೆಂದು ಹೋದರೆಂದು ಅವಳಿಗೆ ನಿಶ್ಚಯವಾಯಿತು. ದುಃಖಿಸುತ್ತ ಕಮಲಳು ರೂಮ ಸೇರಿದಳು.

೫

ಕುಲಕರ್ಣಿಯು ಬೆಳಗಾಂವ ಸ್ಟ್ಯಾಂಡಿನಿಂದ ಭಾರವಾದ ಮನ ಸ್ಸಿಂದ ಹೊರಟನು. ನೇರವಾಗಿ ಯಾವದಾದರೊಂದು ಖಾನಾವಳಿಯಲ್ಲಿ ಊಟ ಮಾಡಿಕೊಂಡು ಅಲ್ಲಿಯೇ ಕೆಲ ದಿನ ವಿಶ್ರಮಿಸಬೇಕೆಂದು ವಿಚಾರ ಮಾಡಿ ಹಾಗೇ ಊರಲ್ಲಿ ಹೊರಟನು. ಇದುರಿನಲ್ಲಿ ಜಾಲೀ ( Joly ) ರೆಸ್ಟಾರೆಂಟ ಕಂಡಿತು ಅಲ್ಲಿ ಚಹಾ, ಫಲಹಾರ ತೀರಿಸಿಕೊಂಡು ಯಾವ ವಿಶ್ರಾಂತಿ ಗೃಹದಲ್ಲಿ ವಸ್ತಿ ಮಾಡಬೇಕೆಂದು ಮನದಲ್ಲಿ ವಿಚಾರ ಮಾಡಿ ದನು. ಒಂದು ಭೋಜನಾಲಯದಲ್ಲಿ ಊಟ ಮಾಡಿ ಎಲೆ ಅಡಿಕೆ ಮೆಲ್ಲುತ್ತ ದಾರಿಯ ಜನರನ್ನು ನಿರೀಕ್ಷಿಸುತ್ತ ಕುಳಿತ ಹೆಂಗಳೆಯರನ್ನು ಕಂಡು ಇಲ್ಲಿಯೇ ಯಾರನ್ನಾದರೂ ಆಶ್ರಯಿಸಿಕೊಂಡು ದುಡ್ಡು ತೀರುವವರೆಗೆ ಇದ್ದರಾಯಿತು. ಎಂಬ ಆಲೋಚನೆ ಸುಳಿಯಹತ್ತಿತು. ಆದರೆ ಮನಸ್ಸಿನ ವಿವೇಕ ಬುದ್ಧಿ

ಮುಂದೆ ? ಎಂಬ ಗಂಭೀರ ಪ್ರಶ್ನೆ ಉದ್ಭವವಾಯಿತು. ಮುಂದೆ ಯಾತರದು? ಜೀವನದ ಅಂತ್ಯ ” ಎಂದು ವಿಚಾರ ಮಾಡುತ್ತ ಸಿಗಾರೇಟ ಸೇದುತ್ತ ಅತ್ತ ಇತ್ತ ನೋಡುತ್ತ ನಡೆದನು. ಹಾಗೇ ಮುಂದೆ ಸಾಗುವದರಲ್ಲಿ ( ಸುಖ ಲಾಜ ) ಕಂಡಿತು. ಅಲ್ಲಿ ಹೋಗಿ ಒಂದು ರೂಮು ಬಾಡಿಗೆಗಾಗಿ ತೆಗೆದುಕೊಂಡು ಊಟಕ್ಕೆ ಹೋದನು. ಊಟ ಮುಗಿಸಿ ವಿಶ್ರಾಂತಿಗಾಗಿ ರೂಮಿನಲ್ಲಿ ಹೋಗಿ ಮಲಗಿಕೊಂಡನು.

ಸಾಯಂಕಾಲ ಹಾಸಿಗೆಯನ್ನು ಸರಿಪಡಿಸಲು ಓರ್ವ ಹುಡುಗನು ಬಂದನು. ಅವನು “ ಸರ್ ಏಳುವಿರಾ ? ಹಾಸಿಗೆ ಹಾಕಿ ಕೊಟ್ಟು ಹೋಗುವೆ. ” ಎಂದು ಕೈಯಲ್ಲಿಯ ಕಸಬರಿಗೆ ಅಲ್ಲಿಯೇ ಇಟ್ಟು ಕುಲಕರ್ಣಿಯ ಮುಖ ನೋಡಹತ್ತಿದನು. ಹಾಗೇ “ ತಮ್ಮ ಊರ ಯಾವದು ? ಎಂದು ನಮ್ರತನದಿಂದ ಪ್ರಶ್ನಿಸಿದ

“ ತಮ್ಮಾ ಈ ನಿರ್ಭಾಗ್ಯನ ಊರು ಏತಕ್ಕೆ ಕೇಳಬಯಸಿದೆ ? ಅದರಿಂದ ನಿನಗಾವ ಲಾಭವಿದೆ ” ಎಂದು ಬೇಜಾರದ ಧ್ವನಿಯನ್ನು ಎಳೆದು ಸಿಗಾರೇಟ ಹೊತ್ತಿಸುತ್ತ ಬಳಿಯ ಖುರ್ಚಿಯ ಮೇಲೆ ಹೋಗಿ ಕುಳಿತನು. ಹಾಗೇ ಕಿಡಿಕಿಯ ಹೊರಗಡೆ ನೋಡುತ್ತಿರಲು ಇದುರಿನ ಸಾಲಿನಲ್ಲಿ ಮಹಡಿಯ ಮೇಲೆ ಹದಿನೆಂಟು ವಿಕ್ಕದ ಬಾಲೆಯು ಸಿಂಗರಿಸಿಕೊಳ್ಳುತ್ತಿದ್ದಳು. ಅವಳು ಒಂದು ಲಂಗವನ್ನು ಉಟ್ಟಿದ್ದಳು. ಮೈ ಮೇಲೆ ಬಾಡಿ ತೊಟ್ಟಿದ್ದಳು ತಲೆಯನ್ನು ಬಾಚಿಕೊಂಡು ಪೌಡರ ಲೇಪನ ನಡೆದಿತ್ತು. ಆ ಅಂಗನೆಯ ಅಂಗಾಂಗ ಕಂಡು ದಿಗ್ಭ್ರಮೆಯಾಯಿತು ಅವಳನ್ನೇ ನೋಡುತ್ತ ನಿಂತ ಕುಲಕರ್ಣಿಯನ್ನು ಆ ಬಾಲಕನು ಕಂಡು “ ಈ ಗಿರಾಕಿ ಇಂಥದೇ ಅದೆ, ವಿಚಾರಿಸಿದರೆ ತಿಳಿಯುವದು ” ಎಂದು ಬಗೆದು ಹಾಸಿಗೆ ಸರಿಪಡಿಸ ಹತ್ತಿದನು ಆ ಅಂಗನೆಯ ಬೊಟ್ಟು ಕುಚಗಳು. ಕಾಯಕ್ಕೆ ಸರಿಯಾದ ಕ.ಚಗಳಿಂದಲೂ, ಪ್ರಾಯದಿಂದಲೂ, ಗೋದಿಗೆಂಪು ಮೈಬಣ್ಣದಿಂದಲೂ, ನಿಡಿದಾದ ಜಡೆಯಿಂದ ಬಹಳೇ ಶೋಭಾಯಮಾನವಾಗಿ ತೋರುತ್ತಿದ್ದಳು. ಕುಲಕರ್ಣಿಯು ತನ್ನ ಕಡೆಗೆ ನೋಡುತ್ತಿದ್ದುದ್ದು ಅವಳಿಗೆ ತಿಳಿದಿಲ್ಲ. ತುಟಿಗೆ ಬಣ್ಣ ಬಳಿದು ಅತ್ತಿತ್ತ ಸುತ್ತಲಿಗೆ ನೋಡುಕೊಳ್ಳುವಾಗ ಕುಲಕರ್ಣಿ ನೋಡುತ್ತಿರುವದು ಕಂಡಿತು. ಎಷ್ಟಾ

ದರೂ ಹೆಣ್ಣು ಜನ್ಮ ಲಜ್ಜೆಯ ತವರು ಮನೆ. ಬೇಗನೆ ಗಳದ ಮೇಲಿನ ಪತ್ತಲ ಜಗ್ಗಿಕೊಂಡು ಹೊದೆದುಕೊಂಡಳು.

ಹುಡುಗನು " ಸರ್ ತಮಗೆ ಅವಳ ಪರಿಚಯವಿದೆಯೇ " ಎಂದು ಮಾತಿಗೆ ಸುರು ಮಾಡಿದನು.

" ಇಲ್ಲ ನಿನ್ನ ಹೆಸರು ಏನು ? "

" ಶಂಕರ ಸ್ವಾಮಿ "

" ನಾವು ಸ್ವಾಮಿಯಲ್ಲ, ರಾಯರು " ಎಂದು ಕುಲಕರ್ಣಿ ನಕ್ಕನು.

" ಆಗಲಿ, ಸರ್ "

" ಶಂಕರ ಇವಳು ಯಾರು ನಿನಗೆ ಪರಿಚಯವಿದೆಯೇ ?

" ಪರಿಚಯವಿಷ್ಟೇ ಯಾಕೆ ? ಚೆನ್ನಾಗಿ ಪರಿಚಯವಿದೆ. "

" ಹಾಗಾದರೆ ಇವಳು ಯಾರು ? " ಎಂದು ಕಣ್ಣ ಸನ್ನೆಯಿಂದ ಅವಳನ್ನು ತೋರಿಸುತ್ತ ಸಿಗರೇಟ ಎಳೆಯಹತ್ತಿದನು.

ಸರ ಇವಳ ಹೆಸರು ಗುಲಾಬಿ ಹೊಸದಾಗಿ ಇಲ್ಲಿಗೆ ಬಂದಿದ್ದಾಳೆ ಗಾಯನದಲ್ಲಿ ಮಿಗಿಲಾದವಳು. ಇವಳಿಗೆ ಸಾಯಂಕಾಲವಾಯಿತೆಂದರೆ ಗಿರಾಕಿ ಚಾಲೂ ಆಗುತ್ತವೆ. ಮಧ್ಯ ರಾತ್ರಿಯವರೆಗೂ ಬಿಡುವಿಲ್ಲ. ಆದರೆ ಯಾರನ್ನೂ ಸಮೀಪಕ್ಕೆ ಕರಕೊಳ್ಳುವದಿಲ್ಲ ಸಂಗೀತ ಕೇಳುವದು. ತಿರುಗಿ ಹೋಗುವದಿಷ್ಟೇ ಬಂದವರ ಕೆಲಸ. ಒಂದು ತಾಸಿಗೆ ಐದು ರೂಪಾಯಿ ಚಾರ್ಜ ಇಟ್ಟಿದ್ದಾಳೆ. ರಾತ್ರಿ ಇರುವವರಿಗೆ ನೂರು ರೂಪಾಯಿ ಚಾರ್ಜ ಮಾಡುತ್ತಾಳೆ. ಯಾರು ಕೊಡುವವರು ಈ ಕಾಲದಲ್ಲಿ " ಎಂದು ಕುಲಕರ್ಣಿ ಮುಖ ನೋಡಹತ್ತಿದನು.

ಕುಲಕರ್ಣಿಯು ಶಂಕರನ ಮಾತುಗಳನ್ನು ಕೇಳುತ್ತ ಸಿಗರೇಟನ್ನು ಜಗ್ಗುತ್ತ ಕೆಮ್ಮುತ್ತ ಕುಳಿತನು. ಶಂಕರನು ಹೇಳುವದನ್ನೆಲ್ಲ ಹೇಳಿ ಮುಗಿಸಿದನು.

" ಶಂಕರ ನನಗೆ ಅವಳ ಭೆಟ್ಟಿ ಮಾಡಿಸುವೆಯಾ ? "

"ಯಾರು ಬೇಡೆನ್ನುವರು ಈಗಲೇ ಹೋಗಿ ಹೇಳಿ ಬರುವೆನು. ಸಾಯಂಕಾಲ ಬರುವದಾಗಿ" ಎಂದು ಶಂಕರನು ನುಡಿದು ಕುಲಕರ್ಣಿಯು ಮೋರೆ ನೋಡಹತ್ತಿದನು.

"ಆಗಲಿ, ಹೇಳಿ ಬಿಡು. ನೀನೂ ನನ್ನ ಸಂಗಡ ಬರಬೇಕು. ನನ್ನು ಪರಿಚಯ ಮಾಡಿ ಕೊಟ್ಟು ಹಿಂದಿರುಗು."

"ಪರಚಯ, ಗಿರಿಚಯ ಮಾಡಿಕೊಳ್ಳಲು ಅವರನ್ನೇನು ನೀವು ಉಡಿಕೆ ಆಗುವವರಿದ್ದೀರೇನು?" ಎಂದು ನಗಹತ್ತಿದನು.

ಕುಲಕರ್ಣಿಯು ಆ ಶಂಕರನ ಚಾಣಾಕ್ಷತನದ ನುಡಿ ನೋಡಿ ಪೆಚ್ಚಾದನು. 'ಆಗಲಿ ೯ ಘಂಟೆಗೆ ಬಾ ಹೋಗೋಣ' ಎಂದು ಹೇಳಿದನು.

"ಆಗಲಿ.........." ಎಂದು ಹೇಳಿ ಶಂಕರನು ಎರಡು ಹೆಜ್ಜೆ ಮುಂದೆ ಹೋಗಿ ಹಿಂದೆ ಹೊರಳಿ "ಚಹಕ್ಕೆ ಸ್ವಲ್ಪ ದುಡ್ಡು......." ಎಂದು ಶಂಕರನು ಕುಲಕರ್ಣಿಯು ಮುಖ ನೋಡಹತ್ತಿದನು.

ಕುಲಕರ್ಣಿಯು ಕೋಟಿನ ಜೇಬಿನಿಂದ ಐದರ ನೋಟು ತೆಗೆದು ಶಂಕರನ ಕೈಗಿತ್ತನು. ಶಂಕರನು ಆನಂದಭರಿತನಾಗಿ "ನಮಸ್ತೆ ಸರ್ ಎಂದು ಹೇಳಿ ಲಾಯಿಟ ಹಚ್ಚಿ ಆನಂದದಿಂದ ಹೊರಹೋದನು.

ಸಂಜೆ ಏಳು ಘಂಟೆಯಾಯಿತು. ಕುಲಕರ್ಣಿಗೆ ಎಲ್ಲಿಯಾದರೂ ತಿರುಗಾಡಿಕೊಂಡು ಬರಲು ಹೊರಬೀಳಬೇಕೆಂದರೆ "ಗುರುತಿನ ಸ್ಥಳ ಗೆಳೆಯರು ಭೆಟ್ಟಿಯಾಗಬಹುದು. ಮತ್ತು ಅವರು ತಮ್ಮಲ್ಲೇಕೆ ಇಳಿದುಕೊಳ್ಳಲಿಲ್ಲವೆಂದು ಹಟ ಮಾಡಬಹುದು. ಸುಮ್ಮನೇ ಇಲ್ಲಿಯೇ ಕುಳಿತರಾಯಿತು. ರಾತ್ರಿ ೯ ಘಂಟೆಗೆ ವೇಶ್ಯೆಯ ಮನೆಯಲ್ಲಿ ವಯ್ಯಾರಿಯ ಮಗ್ಗುಲಲ್ಲಿ, ಜೀವನದ ಅಂತ್ಯದ ಭಾಗವನ್ನು ಭೋಗವಿಲಾಸದಲ್ಲಿ, ಸಾವಿನ ಮನಗೆ ಸಮೀಪಿಸುವ ದಾರಿಯಲ್ಲಿ, ಶಿಗರೇಟಿನ ಬೆಂಕಿಯಲ್ಲಿ, ಕಾಲ ಕಳೆಯುವದು" ಎಂದು ವಿಚಾರ ಮಾಡುತ್ತ ಸಿಗರೇಟ ಸೇದುತ್ತ ಆರಾಮ ಖುರ್ಚಿಯ ಮೇಲೆ ಕುಳಿತನು.

ಪಡಸಾಲೆಯಲ್ಲಿ ಸುಂದರವಾದ ನಾಯಿಯೊಂದು ಉತ್ತಮ ಸರಪಳಿಯಿಂದ ಕಟ್ಟಿದ್ದಾರೆ. ಕುಲಕರ್ಣಿಯು ಬರುವದನ್ನು ದಾರಿ ಕಾಯುತ್ತ

ಬಾಗಿಲಲ್ಲಿ ಗುಲಾಬ ಸಾನಿಯು ನಿಂತಿದ್ದಾಳೆ. “ಈ ಊರಿಗೆ ಬಂದು ತಿಂಗಳಾಯಿತು. ಒಬ್ಬರೂ ನನ್ನ ಖರ್ಚ ಹಿಡಿಯುವ ದಾತಾ ಸಿಕ್ಕೇರಲಿಲ್ಲ. ಆದರೆ ಇಂದು ಅದಾವ ಸರದಾರ, ಸುಭೇದಾರ ಬರುವನು?” ಎಂಬ ವಿಚಾರವು ಸಾನಿಯನ್ನು ತಿನ್ನಹತ್ತಿತು. ಗಡಿಯಾರ ನೋಡಿದಳು. ಒಂಭತ್ತು ಘಂಟೆಯಾಯಿತು. ಇಂದಿನ ಒಡೆಯ ಬರುವ ವೇಳೆಯಾಯಿತೆಂದು ಅತ್ತಿತ್ತ ನೋಡುತ್ತಿದ್ದಳು. ಅಷ್ಟರಲ್ಲಿ ಇದುರಿನ ಲಾಜಿಂಗದಿಂದ ಶಂಕರನ ಬೆನ್ನು ಹಿಂದುಗಡೆ ನಸುಗೆಂಪು ಬಣ್ಣದ, ೫॥ ಫೂಟ ಎತ್ತರವಾದ, ನಿಡಿದಾದ ಮೂಗಿನ, ಸ್ವಲ್ಪ ಮೈಕಟ್ಟಿನ ಆಳು, ಶೇರವಾನಿ ಪ್ಯಾಂಟ, ಪಾರ್ಸೀ ಕೋಟನ್ನು ಧರಿಸಿ, ಫ್ರೆಂಚ ಸೇಂಟನ್ನು ಸಿಂಪಡಿಸಿಕೊಂಡು ಬರುತ್ತಿದ್ದನು. ನೇರವಾಗಿ ಶಂಕರ ಮನೆಯ ಮೆಟ್ಟಿಲು ಹತ್ತಿದನು. ಹಿಂದಿನಿಂದ ಕುಲಕರ್ಣಿ ಅನುಸರಿಸಿಯೇ ಇದ್ದ. ಗುಲಾಬಸಾನಿಯು ಕುಲಕರ್ಣಿಗೆ “ನಮಸ್ತೆ ಬನ್ನಿ” ಎಂದು ಆದರದಿಂದ, ಮಂದಸ್ಮಿತಳಾಗಿ ಸ್ವಾಗತಗೈದಳು. ಹಾಗು ಕುಲಕರ್ಣಿಯ ಕೈಯಲ್ಲಿಯ ಛತ್ರಿಯನ್ನು ತೆಗೆದುಕೊಂಡು ಹಾಗೆಯೇ “ಬನ್ನಿ, ಬನ್ನಿ” ಎಂದು ಮುಂದೆ ಸಾಗಿ ತನ್ನ ಪ್ರಾಯವ್ಹೇಟ ರೂಮಿಗೆ ಕರೆದೊಯ್ದಳು.

ನಾಲ್ಕಂಕಣದ ಚೊಕ್ಕಟವಾದ ರೂಮು. ಎಲ್ಲ ಗೋಡೆಗಳಿಗೂ ಬಣ್ಣ ಬಳಿದೇ ಇದೆ. ಒಂದು ಬದಿಯಲ್ಲಿ ಸಂಗೀತ ಕಚೇರಿಯ ಸಾಹಿತ್ಯ. ಒಂದು ಬದಿಯಲ್ಲಿ ಕೊಡುವ ಜನರ ಸಲುವಾಗಿ ಗಾದಿ, ತಕ್ಕೆಗಳು ಇದುರಿನಲ್ಲಿ ಪಲ್ಲಂಗ ಸೊಳ್ಳೆ ಪರದೆಯಿಂದ ಬಿಗಿದಿತ್ತು. ಪಲ್ಲಂಗದ ಮೇಲೆ ಮೆತ್ತನ್ನ ಗಾದಿಯು ಹಾಸಿತ್ತು. ರೂಮ ಪ್ರವೇಶಿಸಿ ಅತ್ತಿತ್ತ ನೋಡಿದನು. ಅರೆಬತ್ತಲೆಯ ಹೆಣ್ಣಿನ ಚಿತ್ರಗಳೂ ತೂಗುತ್ತಿದ್ದವು. ಮತ್ತೊಂಡೆಡೆಗೆ ಕಾಮಸಿ ಕೌಶಲ್ಯೆಯ ಚಿತ್ರ. ಸಿನೇಮಾದ ಅನೇಕ ನಟ ನಟಿಯರ ಚಿತ್ರಗಳಿದ್ದವು. ಕುಲಕರ್ಣಿಯ ಮನಕ್ಕೆ ನೆಮ್ಮದಿ ಶಿಕ್ಕಿತು. ಶಂಕರನು “ಸರ ನಾನು ಹೊರಡುವೆ” ಎಂದನು. ಗುಲಾಬ ಸಾನಿಯು ಆನಂದದಿಂದ “ಶಂಕರ, ಚಹ ತೆಗೆದುಕೊಳ್ಳಲು ಈ ಎರಡು ರೂಪಾಯಿ ತೆಗೆದುಕೋ, ಬೆಳಿಗ್ಗೆ ಏಳು ಘಂಟೆಗೆ ಬಾ, ರಾಯರನ್ನು ಕರೆದುಕೊಂಡು ಹೋಗುವಿಯಂತೆ.” ಎಂದು ಹೇಳಿದಳು. ಕುಲಕರ್ಣಿಯು ತಲೆಯನ್ನು ಅಲ್ಲಾಡಿಸಿದನು. ಶಂಕರನು ಲಾಜಿಂಗಿಗೆ ಹೋದನು.

ಗುಲಾಬಸಾನಿಯು ಸತಾರವನ್ನು ಕೈಯಲ್ಲಿ ತೆಗೆದುಕೊಂಡು ಹಾಡ ಹೋದಳು. "ನನಗೆ ಈ ಸಶಾಸ್ತ್ರಗಾನಬೇಡ. ಸಿನೇಮಾದಲ್ಲಿಯ 'ಎಂದೋ ಎಂದೋ ನಿನ್ನ ದರುಶನಾ' ಅನ್ನು" ಎಂದು ಸೂಚಿಸಿದನು. ಅದಕ್ಕೆ ಗುಲಾಬಸಾನಿಯು ಆನಂದದಿಂದ ಅಂದು ತೋರಿಸಿದಳು. ಕುಲಕರ್ಣಿಯು ಶಿಗಾರೇಟ ಸೇದುತ್ತ ಜಗತ್ತನ್ನೇ ಮರೆತು ಹಾಡಿನಲ್ಲಿ ತಲ್ಲೀನನಾಗಿದ್ದ ಮತ್ತೊಂದು ಶಿಗಾರೇಟ ಹೊರತೆಗೆದನು. ಗುಲಾಬಸಾನಿಯು ಕಡ್ಡಿಯನ್ನು ಕೊರೆದು ಹಿಡಿದಳು. ಅಲ್ಲಿಯೇ ಕುಲಕರ್ಣಿಯು ಅವಳನ್ನು ಬಿಗಿಯಪ್ಪಿದನು. ಅವನ ಬಾಹುಗಳಲ್ಲಿ ಸಿಕ್ಕ ಗುಲಾಬಿಯು ಗುಲಾಬಿ ಹೂವಿನಂತೆ ಮುದ್ದೆಯಾದಳು. ಗುಲಾಬಿಯ ಕಪೋಲಗಳ ಮೇಲಿನ ಮುದ್ದುಗಳು ಅವಳ ಕಪೋಲಗಳನ್ನೇ ಕೆಂಪಗೆ ಮಾಡಿದವು. ಬಹಳ ದಿನದಿಂದ ತಡೆದ ಕಾಮ ಪ್ರವೃತ್ತಿಯು ಹೊಳೆಯಾಗಿ ಹರಿಯಿತು. ಬೆಳಿಗ್ಗೆ ಎದ್ದಾಗ ಗುಲಾಬ ಸಾನಿಗಾಗಲೀ ಕುಲಕರ್ಣಿಗಾಗಲೀ ಎದ್ದು ತಿರುಗಾಡುವಷ್ಟು ಶಕ್ತಿಯಿದ್ದಿಲ್ಲ. ಹೀಗಾಗಿ ಇಬ್ಬರೂ ಏಳು ಘಂಟೆಯವರಿಗೆ ಒಬ್ಬರ ಮಗ್ಗುಲಲ್ಲಿ ಒಬ್ಬರು ಪವಡಿಸಿದ್ದರು.

ದಿನಗಳು ಕಳೆದಂತೆ ಸಿಗರೇಟಿನ ಚಟವೂ ಮೀತಿ ಮೀರಿ ಬೆಳೆಯಿತು. ವೇಶ್ಯೆಯ ಸಂಗದಿಂದ ಪ್ರಕೃತಿಯೂ ಕೆಡಹತ್ತಿತು. ಕೆಮ್ಮು ಜೋರಾಯಿತು. ಪಾಟೀಲ ಡಾಕ್ಟರರಿಗೆ ತೋರಿಸಿದನು. "ನಿಮ್ಮ ಹಾರ್ಟ ಕೆಟ್ಟಿದೆ. ನೀವು ಬೇಗನೇ ತೋರಿಸಿ ಔಷಧೋಪಚಾರ ಮಾಡಿಸಿಕೊಳ್ಳಿರಿ". ಎಂದು ಹೇಳಿದರು.

ಐನೂರು ರೂಪಾಯಿ ಕಟ್ಟಿಕೊಂಡು ಕಮಲಳು ಕುಲಕರ್ಣಿಯನ್ನು ಕಾಣದೆ ದಿಕ್ಕು ತಪ್ಪಿದವಳಾಗಿ ದಿನಾಲು ಕಣ್ಣೀರು ಸುರಿಸುತ್ತ, ಕುಲಕರ್ಣಿಯ ಭಾವ ಚಿತ್ರವನ್ನು ಪೂಜಿಸುತ್ತ, ನನಗಾಗಿ, ತ್ಯಾಗ ಮಾಡಿದ ಜೀವ, ನನ್ನ ಹಿತವೇ ತನ್ನ ಹಿತವೆಂದು ಬಗೆದ ಮನಸ್ಸು, 'ದೇವಾ ಎಂಥ ಅಮೌಲ್ಯವಾದ ವಸ್ತುವನ್ನು ದಯಪಾಲಿಸಿದ್ದಿ. ನನಗೆ ಅದನ್ನು ಸಂರಕ್ಷಿಸುವ ಭಾರ ಆಗಲಿಲ್ಲ. ಕೈಯಿಂದ ಜಾರಿತು. ದೇವಾ ! ಅವರನ್ನು ಎಲ್ಲಿಯಾದರೂ ಸುಖದಿಂದ ಇಡು. ಇಷ್ಟೇ ನನ್ನ ಬೇಡಿಕೆ' ಎಂದು ಕಣ್ಣೀರು ಸುರಿಸಹತ್ತಿದಳು. ಮತ್ತು ಮುಂದಿನ ಜನ್ಮಕ್ಕಾದರೂ ಕೂಡೋಣ.

ಎಂದು ಭಾವಚಿತ್ರಕ್ಕೆ ಹೇಳಿ ಅದಕ್ಕೆ ಮುದ್ದಿಡುತ್ತಿದ್ದಳು. ಸದಾ ಕಾಲ ಅವನದೇ ಧ್ಯಾನ. ಈ ಬಗೆಯಾಗಿ ದುಃಖದಿಂದ ಜೀವನ ಸಾಗಿಸಿದ್ದಳು.

ಅಂದು ಬೆಳಗಿನ ಜಾವ ಎಲ್ಲರೂ ಹಳ್ಳಕ್ಕೆ ನೀರಿಗೆ ಹೊರಟಿದ್ದಾರೆ. ಚಾವಡಿಯಲ್ಲಿ ಓರ್ವ ಸತ್ತಿರುವ ಸುದ್ದಿ ಎಲ್ಲ ಕಡೆಗೂ ಹರಡಿತು. ಎಲ್ಲರೂ ನೋಡಿ ಬರುವವರೇ. ಕಡೆಗೆ ಗೌಡರು ಬಂದು ಶವವನ್ನು ತಪಾಸಿಸಿದರು. ಅವನ ಕೋಟಿನಲ್ಲಿ ನಾಲ್ಕು ನೂರು ರೂಪಾಯಿಗಳು ಮತ್ತು ಒಂದು ಪತ್ರ ದೊರೆತವು. ಆ ಪತ್ರದಲ್ಲಿ ಕೆಳಗಿನ ಪ್ರಕಾರ ಬರೆಯಲ್ಪಟ್ಟಿತ್ತು.

ಪ್ರಿಯ ಕಮಲಾ ಸಾಠೆ ಇವಳಿಗೆ:—

" ನನ್ನ ಅಂತ್ಯಕ್ರಿಯೆಯು ನಿನ್ನ ಹಸ್ತದಿಂದ ಜರುಗಲೆಂದು ನಿನ್ನೆ ರಾತ್ರಿ ಇಲ್ಲಿ ಬಂದಿರುವೆ. ನನ್ನ ಕಿಸೆಯಲ್ಲಿ ನಾಲ್ಕು ನೂರು ರೂಪಾಯಿ ಇವೆ. ನನ್ನ ಅಂತ್ಯಕ್ರಿಯೆ ಸಾಗಿಸು. ಆತ್ಮಕ್ಕೆ ಶಾಂತಿ ನೀಡು. ನೀನು ಸುಖವಾಗಿ ಕಾಲ ಕಳೆ. " ಇಷ್ಟೇ ನನ್ನ ವಿನಂತಿ ಇಂತಿ ಬಿನ್ನಹ.

ಕುಲಕರ್ಣಿ.

ಪತ್ರದ ಸುದ್ದಿ ಎಲ್ಲರಿಗೂ ಗೊತ್ತಾಯಿತು. ಪಟೇಲರು ಶವ ಪಂಚನಾಮೆ ಮಾಡಿ ಕಮಲಳ ಕಡೆಯಿಂದ ಹೆಣಕ್ಕೆ ಸಂಸ್ಕಾರ ಮಾಡಿಸಿದರು. ತಿರುಗಿ ಬರುವಾಗ ಕಮಲಳು ಹಿಂದೆ ಉಳಿದಿದ್ದಳು. ಹಿಂದಿನಿಂದ ಬರಬಹುದೆಂದು ಆಶಿಸಿ ಮುಂದೆ ನಡೆದರು. ಆದರೆ ಹಿಂದಿನ ಭಾವಿಯಲ್ಲಿ ಧಡಲ್ ಶಬ್ದ ಕೇಳಿಸಿತು. ಎಲ್ಲರೂ ಧಾವಿಸಿದರು. ಆದರೆ ಭಾವಿಯಲ್ಲಿ ಹಾರಿಕೊಂಡವರು ಬೇರೆ ಯಾರೂ ಆಗದೆ ಕಮಲ ಎಂದು ತಿಳಿಯಿತು. ಎಲ್ಲರೂ ದುಃಖಿಸಿದರು. " ಎಂಥ ಹುಡಿಗಿ ಕಮಲ ! " " ಎಂಥ ಪ್ರೇಮ ! " ಎಲ್ಲರ ಬಾಯಲ್ಲಿಯೂ ಕಮಲ ಕುಲಕರ್ಣಿಯವರ ಕರುಣ ಕಥೆಯು ಕಟ್ಟಿತ್ತು.

